ಪುಸ್ತಕ ಭಂಡಾರ ಮಾಲೆ ೪

# ನಳ ಚರಿತ್ರೆಯ ಸಂಗ್ರಹ

ಸಂಪಾದಕ :

ಎಚ್. ಎಂ. ಶಂಕರನಾರಾಯಣರಾವ್, ಎಂ. ಎ.



ಮೈಸೂರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿ



ಗ್ರಂಥಕರ್ತ ಪ್ರೊ|| ಹೆಚ್. ಎಂ. ಶಂಕರನಾರಾಯಣರಾವ್‌ರವರು

ಪುಸ್ತಕ ಭಂಡಾರದ ಮಾಲೆ–೪

# ನಳಚರಿತ್ರೆಯ ಸಂಗ್ರಹ

ಸಂಪಾದಕ

ಎಚ್. ಎಂ. ಶಂಕರನಾರಾಯಣರಾವ್, ಎಂ. ಎ.

ಪ್ರಕಾಶಕರು

ರಾಜ್ಯ ವಯಸ್ಕರ ಶಿಕ್ಷಣ ಸಮಿತಿ

ಮೈಸೂರು

ಈ ಗ್ರಂಥವನ್ನು

ನನ್ನ ಇಂಗ್ಲಿಷ್ ಮತ್ತು ಕನ್ನಡದ ವಿದ್ಯಾಗುರುಗಳೂ

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ

ಮೊದಲನೆಯ ಅಧ್ಯಕ್ಷರೂ ಆಗಿದ್ದ

ಕನ್ನಡದ ರಕ್ಷಾಮಣಿ

**ಆಚಾರ್ಯ 'ಶ್ರೀ' ಅವರಿಗೆ**

ಭಕ್ತಿಯಿಂದ ಅರ್ಪಿಸಿದೆ

# ಮುನ್ನುಡಿ

ಮೈಸೂರು ರಾಜ್ಯದ ವಯಸ್ಕರ ಶಿಕ್ಷಣ ಸಮಿತಿಯವರು ತಮ್ಮ ಪುಸ್ತಕ ಭಂಡಾರ ಮಾಲೆಯಲ್ಲಿ ಪ್ರಕಟಿಸಿದ ಕನಕದಾಸರ 'ನಳಚರಿತ್ರೆಯ ಸಂಗ್ರಹ' ಮೂರನೆಯ ಮುದ್ರಣವನ್ನು ಕಾಣುತ್ತಿರುವುದು ಸಂತೋಷದ ಹಾಗೂ ಹೆಮ್ಮೆಯ ವಿಷಯ. ಈ ಮುದ್ರಣವನ್ನು ಹೊರತರಲು ವಿಶೇಷ ಧನ ಸಹಾಯ ಮಾಡಿದ ಮೈಸೂರು ಸರ್ಕಾರಕ್ಕೆ ಸಮಿತಿ ಅತ್ಯಂತ ಕೃತಜ್ಞ ವಾಗಿದೆ.

ಈಗ ನಾವು ವಿಜ್ಞಾನಯುಗದಲ್ಲಿದ್ದೇವೆ. ಇಹಲೋಕದ ಸುಖಕ್ಕೆ ಸಾಧಕ ವಾದ ಸಮಸ್ತ ಅನುಕೂಲಗಳನ್ನೂ ವಿಜ್ಞಾನ ನಮಗೆ ಒದಗಿಸಿಕೊಟ್ಟಿದೆ ಅತ್ಯಂತ ಆಶ್ಚರ್ಯಕರವಾದ ರೀತಿಯಲ್ಲಿ. ಅದ್ಭುತ ದೀಪದ ಕಥೆ ನಿಜ ವಾಗಿದೆ. ಮನುಷ್ಯನು ಕಾಲ ದೇಶಗಳನ್ನು ಗೆದ್ದು ಅದನ್ನು ಸಂಕೋಚಗೊಳಿಸಿ ದ್ದಾನೆ; ಅಷ್ಟೇ ಅಲ್ಲದೆ ಚಂದ್ರಲೋಕದಲ್ಲಿ ಪದಾರ್ಪಣ ಮಾಡಿ ತನ್ನ ದೃಷ್ಟಿ ಯನ್ನೂ ಕೈಗಳನ್ನೂ ಇತರ ಗ್ರಹಗಳ ಕಡೆಗೂ ಚಾಚಿದ್ದಾನೆ. ಕಾಲಕ್ರಮ ದಲ್ಲಿ ಈ ಗ್ರಹಗಳು ತಮ್ಮ ರಹಸ್ಯವನ್ನು ವಿಜ್ಞಾನಿಗೆ ಬಿಟ್ಟುಕೊಡಬಹುದು. ಇದೆಲ್ಲ ಮಾನವನ ಅದ್ಭುತ ಸಾಧನೆಗಳೇನೋ ನಿಜ. ಆದರೆ ಅವನಿಗೆ ಮಾನ ಸಿಕವಾದ ಶಾಂತಿ ಇದೆಯೇ ? ಬೆಳಗಿನಿಂದ ಸಂಜೆಯವರೆಗೆ ಧಾವಂತ ಜೀವನ ನಡೆಸುವ ಆಧುನಿಕ ನಾಗರಿಕ ಮಾನವನ ಮನಸ್ಸು ಒಂದು ತಳಮಳದ ಕಡಾಯಿಯಂತಿದೆ. ಹೀಗಿರುವಲ್ಲಿ ಈ ತಳಮಳವನ್ನು ಕಡಮೆಮಾಡಿ, ಸಂಸಾರದ ದುಃಖವನ್ನೂ ಕಷ್ಟವನ್ನೂ ತಗ್ಗಿಸಿ, ಸಮಾಧಾನವನ್ನುಂಟುಮಾಡುವ ಏಕೈಕ ಮದ್ದು—ಸಜ್ಜನರೊಡನೆ ಸಲ್ಲಾಪ; ಕಾವ್ಯರಸದ ಆಸ್ವಾದನೆ, ನಮ್ಮ ಜನರಿ ಗಂತೂ ಯಶಶ್ಶರೀರಿಗಳಾದ ವ್ಯಾಸವಾಲ್ಮೀಕಿಗಳೇ ಆ ಸಜ್ಜನರು. ಗುರು ಪೀಠದಲ್ಲಿರುವ ರಾಮಾಯಣ ಮಹಾಭಾರತಗಳೇ ರಸದ ಮಡುಗಳು. ಈ ಕಾವ್ಯಗಳಲ್ಲಿ ಬರುವ ಒಂದೊಂದು ವ್ಯಕ್ತಿಯೂ ಒಂದೊಂದು ಗುಣಕ್ಕೆ ಆದರ್ಶ ವಾಗಿ ನಿಂತು, ಈಗಲೂ ಭಾರತ ಜನತೆಯನ್ನು ತಿದ್ದುತ್ತಿದ್ದಾರೆ. ಹಳ್ಳಿಗರಿಗೆ ಕಷ್ಟಕಾಲದಲ್ಲಿ ಧೈರ್ಯವನ್ನು ಕೊಡುವ ಹೆಸರುಗಳೆಂದರೆ ರಾಮ, ಸೀತೆ, ನಳದಮಯಂತಿಯರು. ಕಷ್ಟದಲ್ಲಿ ಮುಳುಗಿ ಚಿಂತೆ ಮಾಡುತ್ತಿದ್ದ ಎಳೆಯ ಪ್ರಾಯದ ಹೆಣ್ಣು ಮಗಳಿಗೆ, ಅನುಭವಸ್ಥಳಾದ ಹಿರಿಯಳೊಬ್ಬಳು ಈ ರೀತಿ ಹೇಳುತ್ತಾಳೆ—

ಚಿಂತೆ ಮಾಡಲಿ ಬ್ಯಾಡ, ಛಿ ಹುಚ್ಚಿ ಹಡೆದವ್ವ
ಚಿಂತ್ಯಾಗ ಕಾಯ ಇಳಿತರ ಪಾಂಡವರು
ಅಂಥವರಿಗುಂಟು ವನವಾಸ

ನಮ್ಮ ಸಂಸ್ಕೃತಿಯ ಒಂದು ಮುಖ ಕೆನೆಗಟ್ಟಿ ನಿಂತಿದೆ ಮೇಲಿನ ಪದ್ಯದಲ್ಲಿ.

ಸಂಸ್ಕೃತ ಮಹಾಭಾರತದ ವನಪರ್ವದಲ್ಲಿ ಬರುವ ಸುಪ್ರಸಿದ್ಧವೂ ಪುರಾತನವೂ ಆದ ಕಥೆ ನಳನ ಕಥೆ. ಈ ಕಥೆಯನ್ನು ಕನಕದಾಸರು ತಮ್ಮ ಕಾವ್ಯಕ್ಕೆ ವಸ್ತುವನ್ನಾಗಿ ಆಯ್ದುಕೊಂಡು ಸುಗಮವಾದ ಭಾಮಿನೀಷಟ್ಪದಿಯಲ್ಲಿ (ಭಾಮಿನೀ ಎಂದರೆ ಹೆಂಗಸು. ಆಕೆಯಲ್ಲಿ ಕಾಣುವ ಒನಪು ಒಯ್ಯಾರಗಳನ್ನೂ ನಯನಾಜೂಕುಗಳನ್ನೂ ಇಲ್ಲಿಯೂ ಕಾಣಬಹುದಲ್ಲವೇ ?) ರಚಿಸಿದ್ದಾನೆ. ಕನ್ನಡದಲ್ಲಿ ನಳಚರಿತ್ರೆಯನ್ನು ರಚಿಸಿದ ಇತರ ಯಾವ ಕವಿಗಳಿಗೂ ಸಂದಿರದ ಕೀರ್ತಿ ಕನಕದಾಸರಿಗೆ ಸಂದಿದೆ. ಕನ್ನಡದ ಜನ ನೂರಾರು ವರ್ಷಗಳಿಂದ ಈ ಕೃತಿಯನ್ನು ತಮ್ಮ ಎದೆಗಪ್ಪಿಕೊಂಡು ಮನ್ನಿಸಿದ್ದಾರೆ. ಹಾಗೆ ಮನ್ನಿಸಿ ಮೆಚ್ಚಿದ್ದಾರೆಂಬುದಕ್ಕೆ ಈ ನಳಚರಿತ್ರೆ ಮೂರನೆಯ ಮುದ್ರಣ ಕಾಣುತ್ತಿರುವುದೇ ಸಾಕ್ಷಿಯಾಗಿದೆ. ಈ ಗ್ರಂಥದ ಸಂಪಾದಕರಾದ ಶ್ರೀ ಶಂಕರನಾರಾಯಣ ರಾಯರ ದುಡಿಮೆ ಮೆಚ್ಚುವಂತಹುದಾಗಿದೆಯಲ್ಲದೆ ಅವರು ಈ ವಿಷಯದಲ್ಲಿ ಅಭಿನಂದನಾರ್ಹರೂ ಆಗಿದ್ದಾರೆ. ಮುಂಬರುವ ದಿನಗಳಲ್ಲಿ ಪೀಠಿಕೆ ಟಿಪ್ಪಣಿಗಳಿಂದ ಕೂಡಿದ ಈ ಸಂಗ್ರಹ ಹಳ್ಳಿ ಹಳ್ಳಿಗಳಲ್ಲಿ ಮೆರೆದು ಜನರು ನಮ್ಮ ಸಂಸ್ಕೃತಿಯ ವಿಷಯದಲ್ಲಿ ಹೆಮ್ಮೆಗೊಂಡು ಸಮಾಧಾನ ಶಾಂತಿ ತುಷ್ಟಿಪುಷ್ಟಿಗಳನ್ನು ಪಡೆಯಲೆಂದೂ, ಈ ಪ್ರಕಟನೆಯಿಂದ ಸರ್ಕಾರದ ಹಣಕ್ಕೆ ಸಾರ್ಥಕತೆ, ರಾಜ್ಯದ ವಯಸ್ಕರ ಶಿಕ್ಷಣ ಸಮಿತಿಗೆ ಕೀರ್ತಿ ಲಭಿಸಲೆಂದೂ ಹಾರೈಸುತ್ತೇನೆ.

ಮೈಸೂರು
ಪರಿಧಾವಿ, ಚೈತ್ರ ಶುದ್ಧ ಹುಣ್ಣಿಮೆ
ಬುಧವಾರ, ೨೯-೩-೧೯೭೨

ಪಿ. ಎನ್. ಜವರಪ್ಪಗೌಡ
ಅಧ್ಯಕ್ಷರು
ರಾಜ್ಯ ವಯಸ್ಕರ ಶಿಕ್ಷಣ ಸಮಿತಿ

# ಮುನ್ನುಡಿ

ಸಂಸ್ಕೃತ ಮಹಾಭಾರತದ ವನಪರ್ವದಲ್ಲಿ ಕಾಣಿಸಿಕೊಳ್ಳುವ ನಳದಮಯಂತಿಯರ ಕಥೆ ಪುರಾತನವೂ ಮತ್ತು ಅತ್ಯಂತ ಪ್ರಸಿದ್ಧವೂ ಆದ ಕಥೆ. ನಳನ ಹಿರಿಯತನ, ಅವನ ಕಷ್ಟಸಹಿಷ್ಣುತೆ, ದಮಯಂತಿಯ ಧೈರ್ಯಸ್ಥೈರ್ಯ, ಪಾತಿವ್ರತ್ಯ—ಇವೇ ಮೊದಲಾದ ಸದ್ಗುಣಗಳು ನಮ್ಮ ಜನರ ಮೇಲೆ ಗಾಢವಾದ ಪರಿಣಾಮವನ್ನುಂಟುಮಾಡಿವೆ. ಇಷ್ಟೇ ಅಲ್ಲ, ಈ ಕಥೆ ಪಾಶ್ಚಾತ್ಯರಿಗೆ ತುಂಬ ಪ್ರಿಯವಾಗಿ ಅನೇಕ ಭಾಷೆಗಳಿಗೆ ಪರಿವರ್ತಿತವಾಗಿದೆ. ವಿಶ್ವಸಾಹಿತ್ಯದ ಕಥಾರತ್ನಗಳಲ್ಲಿ ನಳದಮಯಂತಿಯರ ಕಥೆ ಒಂದೆಂದು ವಿದ್ವಾಂಸರ ಅಭಿಪ್ರಾಯ.

ಇಂಥ ಲೋಕಪ್ರಸಿದ್ಧವಾದ, ಜನಪ್ರಿಯವಾದ ಕಥೆಯನ್ನು ಷಟ್ಪದಿಯ ರೂಪದಲ್ಲಿ ಸರಳವಾಗಿ ಕನ್ನಡ ಜನರಿಗೆ ಪ್ರಿಯವಾಗುವಂತೆ ಹೇಳಿದ ಕೀರ್ತಿ ಮೊಟ್ಟಮೊದಲು ಕನಕದಾಸರಿಗೆ ಸಲ್ಲಬೇಕು. ಕನಕದಾಸರಿಗಿಂತ ಮುಂಚೆ ಚೌಂಡರಸನೆಂಬ ಬ್ರಾಹ್ಮಣ ಕವಿ ನಳಚರಿತ್ರೆಯನ್ನು ಚಂಪೂ ರೂಪದಲ್ಲಿ ಹೇಳಿದ್ದರೂ ಜನರ ಮನ್ನಣೆ ಆ ಕಾವ್ಯಕ್ಕೆ ದೊರೆಯಲಿಲ್ಲ. ಕನಕದಾಸರಾದ ಮೇಲೆ ಶಾಲ್ಯದ ಕೃಷ್ಣರಾಯ, ಕೆಂಪಯ್ಯ, ಮುಮ್ಮಡಿ ಕೃಷ್ಣರಾಜ ಒಡೆಯರು, ಬಸಪ್ಪಶಾಸ್ತ್ರೀ, ಕೆರೂರು ವಾಸುದೇವಯ್ಯ—ಇವರೇ ಮೊದಲಾದ ಅನೇಕರು ಈ ಕಥೆಯನ್ನು ಗದ್ಯ, ಪದ್ಯ, ನಾಟಕ, ಚಂಪೂ ಮತ್ತು ಯಕ್ಷಗಾನ ಇವೇ ಮೊದಲಾದ ಸಾಹಿತ್ಯ ರೂಪಗಳಲ್ಲಿ ಹೇಳಿದ್ದಾರೆ. ಆದರೆ ಈ ಗ್ರಂಥಗಳಾವುವೂ ಜನರಲ್ಲಿ ಪ್ರಸಿದ್ಧವಾಗಿಲ್ಲ. ಆದರೆ ನಳ ಕಾರ್ಕೋಟಕರ ಸಂವಾದವನ್ನು ಓದದ ಕನ್ನಡ ವಿದ್ಯಾರ್ಥಿಯಿಲ್ಲ; ನಳಚರಿತ್ರೆಯ ಪದ್ಯವನ್ನು ಕೇಳದ ಕನ್ನಡಿಗನಿಲ್ಲ. ಹೀಗೆ ಕನ್ನಡ ಲೋಕಪ್ರಿಯವಾದದ್ದು ಕನಕದಾಸರ ನಳಚರಿತ್ರೆ.

ಕನಕದಾಸರ ಈ ಕಾವ್ಯವನ್ನು ಮೈಸೂರು ಶಾರದಾವಿಲಾಸ ಕಾಲೇಜಿನ ಕನ್ನಡ ಅಧ್ಯಾಪಕರಾದ ಶ್ರೀಮಾನ್ ಎಚ್. ಎಂ. ಶಂಕರನಾರಾಯಣ ರಾಯರು ಸೊಗಸಾಗಿ ಸಂಗ್ರಹಿಸಿ, ನಮ್ಮ ಪುಸ್ತಕ ಭಂಡಾರ ಮಾಲೆಯಲ್ಲಿ ಪ್ರಕಟಿಸಲು ಅನುಮತಿಯಿತ್ತಿದ್ದಾರೆ. ಇದಕ್ಕಾಗಿ ಅವರಿಗೆ ಸಮಿತಿ ಋಣಿಯಾಗಿದೆ.

ಮೈಸೂರು<br>
ಜನವರಿ ೨೪, ೧೯೪೮

**ಕಾರ್ಯದರ್ಶಿ**<br>
ಪ್ರಕಟಣಶಾಖೆ

# ವಿಷಯಾನುಕ್ರಮಣಿಕೆ

# ಪೀಠಿಕೆ

---

## ೧. ಕವಿಚರಿತ್ರೆ

'ಮೋಹನತರಂಗಿಣಿ', 'ರಾಮಧಾನ್ಯ ಚರಿತ್ರೆ', 'ಹರಿಭಕ್ತಿಸಾರ', 'ನಳಚರಿತ್ರೆ' —ಇವೇ ಮೊದಲಾದ ಗ್ರಂಥಗಳನ್ನು ರಚಿಸಿರುವ ಕವಿ ಕನಕದಾಸ. ಈ ಗ್ರಂಥಗಳನ್ನಲ್ಲದೆ ಈತನು ಕೆಲವು ಹಾಡುಗಳನ್ನೂ ರಚಿಸಿರುತ್ತಾನೆ. ಕಾಗಿ ನೆಲೆ ಆದಿಕೇಶವನ ಅಂಕಿತದಲ್ಲಿರುವ 'ನೃಸಿಂಹಸ್ತವ'ವೆಂಬ ಚಿಕ್ಕದೊಂದು ಸಾಂಗತ್ಯ ಗ್ರಂಥ ಈತನದೇ ಎಂದು ಬಲ್ಲವರ ಅಭಿಪ್ರಾಯ.

ನಳಚರಿತ್ರೆಯನ್ನು ಕನಕದಾಸನೇ ಬರೆದನೆನ್ನುವುದಕ್ಕೆ ಗ್ರಂಥದಲ್ಲಿ ಯಾವ ಆಧಾರವೂ ದೊರಕುವುದಿಲ್ಲ. ಆದರೆ ಕವಿಯ ಇತರ ಕಾವ್ಯಗಳಲ್ಲಿ ಕಂಡು ಬರುವಂತೆ ಇಲ್ಲಿಯೂ ಚೆನ್ನಿಗರಾಯನ ಅಂಕಿತ ಕಂಡುಬರುವುದರಿಂದಲೂ, ನುಡಿಗಟ್ಟು, ವರ್ಣನೆ, ಶೈಲಿ ಮುಂತಾದ ವಿಷಯಗಳಲ್ಲಿ ಈ ಕಾವ್ಯ ಕವಿಯ ಇತರ ಕಾವ್ಯಗಳೊಡನೆ ಸರಿತೂಗುವುದರಿಂದಲೂ ನಳಚರಿತ್ರೆಯನ್ನು ಕನಕ ದಾಸನೇ ಬರೆದನೆಂಬ ನಂಬಿಕೆ ಜನರಲ್ಲಿ ಬಹಳ ಕಾಲದಿಂದ ಇರುವುದ ರಿಂದಲೂ ಈ ಕಾವ್ಯವನ್ನು ಕನಕದಾಸನೇ ಬರೆದನೆಂದಿಟ್ಟುಕೊಳ್ಳಬಹುದು.

ಕನಕದಾಸನ ಕಾವ್ಯಗಳಿಂದ ಅವನ ಕಾಲ ತಿಳಿದುಬರುವುದಿಲ್ಲ. ಆದ್ದ ರಿಂದ ಅದನ್ನು ಊಹಿಸಿ ತಿಳಿದುಕೊಳ್ಳಬೇಕಾಗಿದೆ. ಈ ಎರಡು ಕಾರಣ ಗಳಿಂದ ಕವಿಯ ಕಾಲವನ್ನು ಸರಿಸುಮಾರಾಗಿ ಗೊತ್ತುಮಾಡಬಹುದು. ಮೊದಲನೆಯದಾಗಿ ಮೋಹನತರಂಗಿಣಿಯಲ್ಲಿ ಕವಿ "ವಾಲ್ಮೀಕಿ ವ್ಯಾಸ ಪುರಾಣಂಗಳ ಕನ್ನಡಿಸಿದ ಕವಿವರರ" ಎಂದರೆ ಕುಮಾರವ್ಯಾಸ, ಕುಮಾರ ವಾಲ್ಮೀಕಿಗಳನ್ನು ಸ್ತೋತ್ರಮಾಡಿರುವುದರಿಂದ ಕನಕದಾಸನು ಇವರಿಗಿಂತ ಈಚಿನವನೆಂದು ಸ್ಪಷ್ಟವಾಗುತ್ತದೆ. ಎರಡನೆಯದಾಗಿ ಕವಿ ವ್ಯಾಸರಾಯರ ಶಿಷ್ಯನೆಂದೂ, ಪುರಂದರದಾಸರ ಸಮಕಾಲೀನನೆಂದೂ ತಿಳಿದು ಬರುತ್ತದೆ. ವ್ಯಾಸರಾಯರು ಪುರಂದರದಾಸರು ವಿಜಯನಗರದ ಅರಸನಾದ ಕೃಷ್ಣದೇವ ರಾಯನ ಕಾಲದಲ್ಲಿದ್ದರು. (೧೫೦೯-೧೫೩೦) ಆದ್ದರಿಂದ ಕವಿಯ ಕಾಲ ವನ್ನು ಹದಿನಾರನೆಯ ಶತಮಾನದ ಪೂರ್ವಾರ್ಧವೆಂದಿಟ್ಟುಕೊಳ್ಳಬಹುದು.

ಕನಕದಾಸನ ಮಹಿಮೆಯನ್ನು ಬೀರತಕ್ಕ ಅನೇಕ ಕಥೆಗಳು ನಮ್ಮಲ್ಲಿ

ಪ್ರಚಾರದಲ್ಲಿವೆ. ಈ ಕಥೆಗಳಲ್ಲಿ ಎಷ್ಟು ನಿಜ, ಎಷ್ಟು ಸುಳ್ಳು ಎಂದು ಹೇಳುವುದು ಕಷ್ಟವಾಗಿದೆ. ಕವಿಯ ಕೃತಿಗಳಲ್ಲಿ ಕಾಗಿನೆಲೆಯ ಆದಿಕೇಶವನ ಅಂಕಿತ ದೊರೆಯುವ ಕಾರಣ, ಕವಿ ಧಾರವಾಡಜಿಲ್ಲೆಯ ಕಾಗಿನೆಲೆಯ ಸ್ಥಳದವನೆಂದು ತೋರುತ್ತದೆ. ಜಾತಿಯಲ್ಲಿ ಇವನು ಬೇಡನೆಂದೂ, ಧಾರವಾಡ ಜಿಲ್ಲೆಯ ಕೋಡತಾಲ್ಲೋಕು ಬಾಡ ಇವನ ಹುಟ್ಟಿದೂರೆಂದು ತಿಳಿದು ಬರುತ್ತದೆ. ಕನಕದಾಸನು ವ್ಯಾಸರಾಯರ ಶಿಷ್ಯನಾಗಿದ್ದು, ಅವರಿಂದ ಉಪದೇಶ ಪಡೆದು ಬೇಲೂರು ಉಡುಪಿ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಕೆಲವು ಕಾಲ ಇದ್ದಂತೆ ಊಹಿಸಬಹುದು. ಏಕೆಂದರೆ, ಇವನ ಕೃತಿಗಳಲ್ಲಿ ವರಪುರದರಸ ಚೆನ್ನಕೇಶವನ ಅಂಕಿತವೂ ದೊರೆಯುತ್ತದೆ. ವರಪುರ ಎಂದರೆ ಬೇಲೂರು.

ಇವನ ಕೃತಿಗಳಲ್ಲಿ, ಕೃಷ್ಣಚರಿತ್ರೆಯೆಂಬ ಮತ್ತೊಂದು ಹೆಸರನ್ನುಳ್ಳ ಮೋಹನತರಂಗಿಣಿ ಸಾಂಗತ್ಯದಲ್ಲಿ ರಚಿತವಾದ ಕಾವ್ಯ. ಕಾವ್ಯದ ಹೆಸರೇ ತಿಳಿಸುವಂತೆ ಅದು ಕೃಷ್ಣಮಹಿಮೆಯನ್ನು ವಿವರಿಸುವ ಕಾವ್ಯ. ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿರುವ ಹರಿಭಕ್ತಿಸಾರವೆಂಬ ಇವನ ಇನ್ನೊಂದು ಚಿಕ್ಕ ಕಾವ್ಯ ನೀತಿ, ಭಕ್ತಿ ಮತ್ತು ವೈರಾಗ್ಯಗಳ ಸ್ವರೂಪವನ್ನು ಸರಳವಾದ ಕನ್ನಡದಲ್ಲಿ ತಿಳಿಸಿಕೊಡುತ್ತದೆ.

ಆದರೆ ಭಾಮಿನೀಷಟ್ಪದಿಯಲ್ಲಿರುವ ಕನಕದಾಸರ ರಾಮಧಾನ್ಯ ಚರಿತ್ರೆ ಒಂದು ವಿಚಿತ್ರವಾದ ಖಂಡಕಾವ್ಯ. ಇದರಲ್ಲಿ ಕವಿ ರಾಗಿಯ ಮೇಲ್ಮೆಯನ್ನು ಬಹು ಚಮತ್ಕಾರವಾಗಿ ವರ್ಣಿಸಿದ್ದಾನೆ. ಶ್ರೀರಾಮನು ರಾವಣನನ್ನು ಕೊಂದು ಋಷಿಗಳ ಆಶ್ರಮಕ್ಕೆ ಬಂದಾಗ, ಋಷಿಗಳು ಅವನಿಗೆ ತಿನ್ನಲು ರುಚಿಕರವಾದ ಭಕ್ಷ್ಯಗಳನ್ನು ಕೊಟ್ಟರು. ರಾಮನು ಅವುಗಳ ರುಚಿ ನೋಡಿ, ಅವುಗಳನ್ನು ಮಾಡಿದ ಧಾನ್ಯಗಳನ್ನು ತರುವಂತೆ ಹೇಳಿದನು. ಶ್ರೀರಾಮನ ಅಪ್ಪಣೆಯಂತೆ ಋಷಿಗಳು ಅವನ ಮುಂದೆ ನರೆದಲೆಗ (ರಾಗಿ), ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾಮೆ, ನವಣೆ, ಗೋಧಿ—ಈ ಒಂಬತ್ತು ಧಾನ್ಯಗಳನ್ನು ತಂದು ಸುರಿಯುತ್ತಾರೆ. ಇವುಗಳಲ್ಲಿ ಯಾವುದು ಉತ್ತಮವಾದ ಧಾನ್ಯ ಎಂದು ಶ್ರೀರಾಮನು ಋಷಿಗಳನ್ನು ಕೇಳಲು ಒಬ್ಬೊಬ್ಬರು ಒಂದೊಂದು ರೀತಿ ಉತ್ತರ ಹೇಳುತ್ತಾರೆ. ಆಗ ನರೆದಲೆಗನಿಗೂ, ವ್ರೀಹಿ (ಅಕ್ಕಿ)ಗೂ ವಾಗ್ವಾದ ನಡೆಯುತ್ತದೆ. ಶ್ರೀರಾಮನು ಇವುಗಳನ್ನು ಆರು ತಿಂಗಳು ಕಾಲ ಸೆರೆಯಲ್ಲಿಡಿಸುತ್ತಾನೆ. ಬಳಿಕ ಗೌತಮನು ಶ್ರೀರಾಮನ ಆಸ್ಥಾನಕ್ಕೆ ಇವುಗಳನ್ನು ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಇಂದ್ರನು ಈ ಧಾನ್ಯಗಳನ್ನು ವಿಮರ್ಶೆಮಾಡಿ ನರೆದಲೆಗನು ಸಾರಹೃದಯನೆಂದೂ,

ವ್ರೀಹಿ ನಿಸ್ಸಾರವೆಂದೂ ಹೇಳಿದನು. ಆಗ ಶ್ರೀರಾಮನು ಅದಕ್ಕೆ ರಾಘವ (ರಾಗಿ) ಎಂದು ಹೆಸರಿಟ್ಟನು.

ವ್ರೀಹಿಗೂ ನರೆದಲೆಗನಿಗೂ ನಡೆದ ಸಂವಾದರೂಪವಾದ ಕೆಲವು ಪದ್ಯಗಳನ್ನಿಲ್ಲಿ ಕೊಟ್ಟಿದೆ.

## ವ್ರೀಹಿ (ಅಕ್ಕಿ)ಯ ಮಾತು

ಕ್ಷಿತಿಯಮರರುಪನಯನದಲಿ ಸು। ವ್ರತ ಸುಭೋಜನಗಳಲಿ ಮಂತ್ರಾ।
ಕ್ಷತೆಗಳಲಿ ಶುಭಶೋಭನದಲಾರತಿಯ ಬೆಳಗುವಲಿ॥
ಕ್ರತುಗಳೆಡೆಯೊಳಗರಮನೆಗಳಲಿ। ಪ್ರತಿದಿನವು ರಂಜಿಸುತ ದೇವರಿ।
ಗತಿಶಯದ ನೈವೇದ್ಯವಾಗಿಹೆನೆಂದನಾ ವ್ರಿಹಿಗ॥ ೧

ಜನಪರಿಗೆ ಶಿಶುಗಳಿಗೆ ಬಾಂಧವ। ಜನರೆಡೆಗೆ ಬ್ರಾಹ್ಮರ ಸಮಾರಾ।
ಧನೆಗೆ ವಿದ್ಯಾರಂಭ ಕಲಿಸುವ ಸಕಲ ಭೂಸುರರ॥
ಮನೆಗಳಲಿ ಹರಿದಿವಸದೌಪಾ। ಸನಗಳಲಿ ತಾ ಯೋಗ್ಯನಹುದೆಂ।
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗೆಂದ॥ ೨

ಹೊಸಮನೆಯ ಪುಣ್ಯಾರ್ಚನೆಗೆ ನೆರೆ। ಹಸಿದ ಹಸುಮಕ್ಕಳಿಗೆ ಸೇಸೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ॥
ಎಸೆವ ವಿಪ್ರರ ಫಾಲದಲಿ ರಂ। ಜಿಸುತ ಗಂಧಾಕ್ಷತೆಯಹೆನು ಭಾ।
ವಿಸಲು ಲೋಕದೊಳಾರು ಸರಿ ತನಗೆಂದನಾ ವ್ರಿಹಿಗ॥ ೩

## ನರೆದಲೆಗ (ರಾಗಿ)ನ ಮಾತು

ಸತ್ವಹೀನರ ಬಡವರನು ಕ। ಣ್ಣೆತ್ತಿ ನೋಡೆ ಧನಾಢ್ಯರನು ಜಿಂ।
ಬತ್ತಿ ನಡೆವೆಯುಪೇಕ್ಷೆ ನಿನ್ನದು ಪೇಳಲೇನದನು॥
ಹೆತ್ತ ಬಾಣತಿಯರಿಗೆ ರೋಗಿಗೆ। ಪಥ್ಯಪಾನದಿ ಹೆಣದ ಬಾಯಿಗೆ।
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ॥ ೪

ಮಳೆದೆಗೆದು ಬೆಳೆಯಡಗಿ ಕ್ಷಾಮದ। ವಿಳಯಕಾಲದೊಳನ್ನವಿಲ್ಲದೆ।
ಯಳಿವಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೆ॥
ಎಲ್ಲವೊ ನೀನೆಲ್ಲಿಹೆಯೋ ನಿನ್ನಯ। ಬಳಗವದು ತಾನೆಲ್ಲಿಹುದೊ ಈ।
ಹಲವು ಧಾನ್ಯಗಳೆನೆಗೆ ಸರಿಯಿಲ್ಲೆಂದ ನರೆದಲೆಗ॥ ೫

ಸತ್ತವರ ಪ್ರತಿಬಿಂಬರೂಪನು। ವಿಸ್ತರಿಸಿ ಪಿತೃಗಳ ನಾಮಗಳ ನಿನ।
ಗಿತ್ತು ಮೂವರ ಪೆಸರಿನಲಿ ಕರೆಕರೆದು ದರ್ಭೆಯಲಿ॥
ನೆತ್ತಿನೆತ್ತಿಯ ಬಡಿದು ಕಡೆಯಲಿ। ತುತ್ತನಿಡುವರು ಶಿಶುಗಳಿಗೆ ನೀ।
ನೆತ್ತಿದೆಯಲಾ ತನುವ ಸುಡಬೇಕೆಂದ ನರೆದಲೆಗ॥ ೬

ಸತ್ವಹೀನರನ್ನೂ, ಬಡವರನ್ನೂ ಕಣ್ಣೆತ್ತಿ ನೋಡದ ಧನಾಢ್ಯರನ್ನು, ರಾಗಿಯ ಮೂಲಕ ವಿಡಂಬನಮಾಡಲು ಕವಿ ಈ ಕಾವ್ಯವನ್ನು ಬರೆದಂತೆ ಕಾಣುತ್ತದೆ.

ಕನಕದಾಸರ ಹಾಡುಗಳು ಕನ್ನಡಿಗರಿಗೆ ಬಹು ಪ್ರಿಯವಾಗಿವೆ. ತುಂಬು ಬಾಳನ್ನು ಬಾಳಬೇಕು. ದೇವರಲ್ಲಿ ಅಚಲವಾದ ಭಕ್ತಿ ಇಡಬೇಕು ಎಂಬ ಭಾವ ಇವರ ಹಾಡುಗಳಲ್ಲಿ ಮೇಲಿನಿಂದ ಮೇಲೆ ಬರುತ್ತದೆ. ಇಂಥ ಹಾಡುಗಳಲ್ಲಿ ಒಂದನ್ನು ಇಲ್ಲಿ ಕೊಟ್ಟಿದೆ.

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ಪ ॥

ಬೆಟ್ಟದ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಘಟ್ಟಿಯಾಗಿ ಸಲಹುವನು ಇದಕೆ ಸಂಶಯ ಬೇಡ ೧

ಆಡವಿಯೊಳಗಾಡುವ ವೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ ೨

ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರೊ
ಬಲ್ಲಿದನು ಕಾಗಿನೆಲೆಯಾದಿ ಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ೩

ಕೊನೆಯದಾಗಿ, ಕವಿ ಬರೆದಿರುವ ನಳಚರಿತ್ರೆ ಒಂಬತ್ತು ಸಂಧಿಗಳನ್ನುಳ್ಳ ಒಂದು ಚಿಕ್ಕ ಕಾವ್ಯ. ಇದು ಭಾಮಿನೀಷಟ್ಪದಿಯಲ್ಲಿದೆ. ಕಾವ್ಯದ ಕಥೆಯನ್ನು ಈ ರೀತಿಯಲ್ಲಿ ಸಂಗ್ರಹಿಸಬಹುದು.

## ೨. ಕಥಾಸಂಗ್ರಹ

ನಿಷಧನಗರದ ದೊರೆ ಶೂರನಾದ ವೀರಸೇನ. ಈತನ ಮಗನೇ ಪ್ರಸಿದ್ಧನಾದ ನಳಚಕ್ರವರ್ತಿ. ಶೌರ್ಯದಲ್ಲಿ, ಗುಣದಲ್ಲಿ, ಶೀಲದಲ್ಲಿ ನಳನಿಗೆ ಸಮಾನರಾದವರು ಈ ಲೋಕದಲ್ಲಿ ಮತ್ತೊಬ್ಬರಿರಲಿಲ್ಲ. ಏಳು ದ್ವೀಪಗಳ ರಾಜರನ್ನು ಗೆದ್ದು ಈತನು ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಈ ಲೋಕದ ಅರಸರುಗಳೆಲ್ಲ ನಳನಿಗೆ ಕಪ್ಪವನ್ನು ತೆತ್ತು ಅವನನ್ನು ಸೇವಿಸುತ್ತಿದ್ದರು. ಈ ರೀತಿಯಿದ್ದ ನಳನ ಓಲಗ ದೇವೇಂದ್ರನ ಓಲಗದಂತೆ ಮೆರೆಯುತ್ತಿತ್ತು.

ಇತ್ತ ಉತ್ತರದೇಶದ ವಿದರ್ಭವೆಂಬ ನಗರದಲ್ಲಿ ಭೀಮನೆಂಬ ರಾಜನು ರಾಜ್ಯಭಾರ ಮಾಡುತ್ತಿದ್ದನು. ಈತನೂ ಗುಣವಂತ, ವಿವೇಕಿ ಮತ್ತು ಶೂರ. ಈತನಿಗಿದ್ದ ಒಂದೇ ಕೊರತೆ ಮಕ್ಕಳಿಲ್ಲದುದು. ಇದರಿಂದ ರಾಜನು ದಿನವೂ ವ್ಯಥೆಪಡುತ್ತಿರಲು, ಒಮ್ಮೆ ದಮನೆಂಬ ಋಷಿ ಈತನಲ್ಲಿಗೆ ಬಂದನು. ಅರಮನೆಗೆ ಬಂದ ಋಷಿಯನ್ನು ರಾಜನು ಬಹುವಾಗಿ ಉಪಚರಿಸಿ, ಆ ಬಳಿಕ ಅವರಿಗೆ ಕೈಮುಗಿದು "ನನಗೆ ಈವರೆಗೆ ಮಕ್ಕಳಾಗಲಿಲ್ಲ. ಮಕ್ಕಳಿಲ್ಲದ ಈ ಸಂಪತ್ತಿನಿಂದೇನು? ನನಗಿರುವ ಸಂಕಟ ಇದೊಂದೇ" ಎಂದು ಕಣ್ಣೀರು ಮಿಡಿದನು. ಆಗ ಆ ಮುನಿಯು ಜ್ಞಾನದೃಷ್ಟಿಯಿಂದ ರಾಜನಿಗೆ ಮಕ್ಕಳಾಗದ ಕಾರಣವನ್ನು ತಿಳಿದು ಅರಸನಿಗೆ "ನೀನು ಪುತ್ರಕಾಮೇಷ್ಟಿಯಾಗವನ್ನು ಮಾಡು. ಅದರಿಂದ ನಿನಗೆ ಮಕ್ಕಳಾಗುವುದು" ಎಂದನು. ಮುನಿಯ ಮಾತಿಗೆ ಒಪ್ಪಿ ಯಾಗಮಾಡಲು, ಭೀಮರಾಜನಿಗೆ ಒಬ್ಬ ಮಗಳಾದಳು. ಆ ಚೆಲುವೆಗೆ ದಮಯಂತಿಯೆಂದು ಹೆಸರಿಟ್ಟು ಋಷಿ ತನ್ನಾಶ್ರಮಕ್ಕೆ ಹೋದನು. ಅರಸನಿಗೆ ಮಕ್ಕಳಾದುದಕ್ಕೆ ರಾಜಧಾನಿಯೇ ಸಂತೋಷ ಸಾಗರದಲ್ಲಿ ಮುಳುಗಿತು.

ಕಮಲಮುಖಿಯಾದ ದಮಯಂತಿ ಉದ್ದವಾದ ಮುಂಗುರುಳು, ತುಂಬು ಮುಡಿ, ಹವಳದಂತಿದ್ದ ತುಟಿ, ಶಂಖದಂತಿದ್ದ ಕೋಮಲವಾದ ಕತ್ತು, ಚಂಚಲವಾದ ಕಣ್ಣು, ಸಂಪಿಗೆಯ ಹೂವಿನಂಥ ಮೂಗು, ಚಂದ್ರನಂತೆ ಹಣೆ, ಹಂಸದಂತೆ ನಡಗೆ ಇವುಗಳಿಂದ ಕೂಡಿ ದಿನದಿನವೂ ಬಿದಿಗೆಯ ಚಂದ್ರನಂತೆ ಬೆಳೆಯುತ್ತಿದ್ದಳು. ದಮಯಂತಿಯ ರೂಪ ಹಾಗಿರಲಿ. ಆಕೆ ಚೆಲುವೆ, ನಿಜ. ಅದಕ್ಕೂ ಮಿಗಿಲಾಗಿ ಗುಣದಲ್ಲಿ, ಶೀಲದಲ್ಲಿ, ಮಾತಿನ ನಯದಲ್ಲಿ, ಗಾಂಭೀರ್ಯದಲ್ಲಿ, ಗುರುಹಿರಿಯರಿಗೆ ಭಕ್ತಿ ತೋರುವುದರಲ್ಲಿ ಆಕೆಯನ್ನು

ವಿರಾರಿಸಿದವರು ಈ ಲೋಕದಲ್ಲಿ ಮತ್ತೊಬ್ಬರಿರಲಿಲ್ಲ. ಹೀಗಿರಲು ಒಂದು ದಿನ ಭೀಮನೃಪಾಲನ ಓಲಗದಲ್ಲಿ ರಾಜರಲ್ಲಿ ಹೆಸರಾದ ನಳಚಕ್ರವರ್ತಿಯ ರೂಪು, ಗುಣ, ಕೀರ್ತಿಗಳನ್ನು ಕವಿಜನರು ಹೊಗಳಿದರು. ಈ ಹೊಗಳಿಕೆಯನ್ನು ಕೇಳಿ ದಮಯಂತಿಯ ಮನಸ್ಸು ಹಿಗ್ಗಿ, ನಳನ ವಿಷಯದಲ್ಲಿ ಅವಳಿಗೆ ಪ್ರೀತಿಯುಂಟಾಯಿತು. ಅವನ ರೂಪು, ಅವಳ ಮನಸ್ಸಿನಲ್ಲಿ ಅಚ್ಚೊತ್ತಿದಂತಾಯಿತು. ಅಂದಿನಿಂದ ದಮಯಂತಿಯ ರೀತಿಯೇ ಬೇರೆಯಾಯಿತು. ಊಟ ಉಪಚಾರಗಳು ಆಕೆಗೆ ಬೇಡವಾದವು. ಯಾವ ವಸ್ತುವನ್ನು ನೋಡಲೂ ಆಕೆ ಆಶೆಪಡಳು. ಕಣ್ತುಂಬ ಎದೆತುಂಬ ನಳನೇ ತುಂಬಿಕೊಳ್ಳಲು, ಆತನ ಚಿಂತೆಯಿಂದ ದಮಯಂತಿ ದಿನದಿನವೂ ಬಾಡತೊಡಗಿದಳು.

ಇತ್ತ ನಿಷಧನಗರಿಯಲ್ಲಿ ಒಂದು ದಿನ ನಳನು ಓಲಗದಲ್ಲಿ ಸಿಂಹಾಸನದ ಮೇಲೆ ಕುಳಿತಿರಲು ದೇಶವನ್ನೆಲ್ಲ ಸುತ್ತಿಬಂದ ಬ್ರಾಹ್ಮಣರು ಅಲ್ಲಿಗೆ ಬಂದರು. ರಾಜನು ಅವರನ್ನು ಮನ್ನಿಸಿ ವಿಶೇಷ ಸಮಾಚಾರವೇನೆಂದು ಕೇಳಿದನು. ಅದಕ್ಕೆ ಬ್ರಾಹ್ಮಣರು "ರಾಜನೇ, ವಿದರ್ಭ ದೇಶದ ಅರಸನ ಮಗಳಾದ ದಮಯಂತಿ ರೂಪವಂತೆ. ಚೆಲುವಿಕೆಯಲ್ಲಿ, ಮೃದುವಾದ ಮಾತಿನಲ್ಲಿ, ನಯದಲ್ಲಿ ದಮಯಂತಿಗೆ ಸಮಾನರಾದವರು ಮತ್ತೊಬ್ಬರಿಲ್ಲ. ಆಕೆಯನ್ನು ಕೈಹಿಡಿಯುವವನು ಎಷ್ಟು ಪುಣ್ಯಮಾಡಿರುವನೋ!" ಎಂದು ನುಡಿದರು. ಬ್ರಾಹ್ಮಣರ ಮಾತನ್ನು ಕೇಳಿ ನಳನಿಗೆ ದಮಯಂತಿಯಲ್ಲಿ ಪ್ರೀತಿಯುಂಟಾಯಿತು. ಆಕೆ ತನಗೆ ಹೇಗೆ ಒಲಿದಾಳು ಎಂಬ ಚಿಂತೆ ಅವನಲ್ಲಿ ಮೊಳೆಯಿತು.

ಹೀಗಿರಲು ಒಮ್ಮೆ ಬೇಟೆಗಾರರು ನಳನನ್ನು ಬೇಟೆಯಾಡಲು ಕರೆಯಲು ಬಂದರು. ದಮಯಂತಿಯ ಚಿಂತೆಯನ್ನು ಮರೆಯಲು ಒಳ್ಳೆಯ ಅವಕಾಶ ದೊರಕಿತೆಂದು ನಳನು ಬೇಟೆಯಾಡಲು ಕಾಡಿಗೆ ಹೊರಟನು. ಕಾಡಿನಲ್ಲಿ ಬಹುಕಾಲ ಬೇಟೆಯಾಡಿ ನಳನಿಗೆ ಬಳಲಿಕೆಯಾಯಿತು. ಬೇಟೆಯನ್ನು ನಿಲ್ಲಿಸಿ ಸಮೀಪದಲ್ಲಿದ್ದ ಊರಿನ ಬಳಿಯ ಉದ್ಯಾನದಲ್ಲಿ ಬಿಡಾರ ಮಾಡಿದನು. ಉದ್ಯಾನದ ಕೊಳದಲ್ಲಿ ಕೈಕಾಲು ತೊಳೆದುಕೊಂಡು ಒಬ್ಬನೇ ಉದ್ಯಾನದಲ್ಲಿ ತಿರುಗಾಡಿದನು. ಆ ಕೊಳದ ತೀರದಲ್ಲಿ ಶುಭ್ರವಾದ ಒಂದು ರಾಜಹಂಸವಿತ್ತು. ಸುಂದರವಾದ ಆ ಹಕ್ಕಿಯನ್ನು ನೋಡಿ ಆಸೆಪಟ್ಟು ನಳನು ಅದನ್ನು ಹಿಡಿದುಕೊಳ್ಳಲು, ಪ್ರಾಣಭಯದಿಂದ ಆ ಹಕ್ಕಿ ರಾಜನನ್ನು ಹೀಗೆ ಬೇಡಿಕೊಂಡಿತು. 'ಅರಸನೇ, ನನ್ನಂಥ ಬಲಹೀನರನ್ನು ಕೊಲ್ಲುವುದು ನಿನಗೆ ಯೋಗ್ಯವಲ್ಲ. ಆನೆಗಳನ್ನು ಕೊಲ್ಲುವ ಸಿಂಹಕ್ಕೆ ನರಿಗಳು ಇದಿರೇ?

ಹಗೆಗಳನ್ನು ಕೊಲ್ಲಬೇಕಾದ ನೀನು ಪರಹಿಂಸೆಮಾಡಕೂಡದು. ನನ್ನ ಮನೆಯಲ್ಲಿರುವ ಹೆಂಡತಿ ಮಕ್ಕಳ ಗೋಳನ್ನಾದರೂ ಕಂಡು ನನ್ನ ಮೇಲೆ ದಯೆ ತೋರು. ಮರ, ಹುತ್ತಗಳೇರಿದವರನ್ನು, ಯುದ್ಧದಲ್ಲಿ ಸೋತವರನ್ನು, ಆಯುಧ ಮುರಿದವರನ್ನು, ಹೆಂಗಸರನ್ನು, ಮರೆಹೊಕ್ಕವರನ್ನು ಕೊಲ್ಲುವುದು ಉಚಿತವಲ್ಲ. ಬಲ್ಲವರು ಇದನ್ನು ಹೇಳಿದ್ದಾರೆ.'

ಹಂಸೆಯು ಎದೆಗರಗುವ ಮಾತನ್ನು ಕೇಳಿ, ನಾಚಿಕೆಗೊಂಡ ರಾಜನು ಅದನ್ನು ಬಿಟ್ಟುಬಿಟ್ಟನು. ಆಗ ಅದು 'ನನ್ನ ಪ್ರಾಣವನ್ನು ಕಾದು ಉಪಕಾರ ಮಾಡಿದ ನಿನಗೆ ಪ್ರತಿಯಾಗಿ ಉಪಕಾರ ಮಾಡುತ್ತೇನೆ. ಅತಿ ಸುಂದರಿಯೂ, ಗುಣವಂತೆಯೂ ಆದ ದಮಯಂತಿ ನಿನಗೆ ತಕ್ಕ ಹೆಂಡತಿ. ಭೀಮನೃಪಾಲನ ಮಗಳಾದ ಅವಳು ನನಗೆ ಒಲಿಯುವಂತೆ ಮಾಡುವೆನು. ಅರಸನೇ, ನನ್ನನ್ನು ನಂಬು. ನಾವು ಎರಡು ನಾಲಗೆಯುವರಲ್ಲ' ಎಂದು ಹೇಳಿತು. ಆದಕ್ಕೆ ನಳನು 'ದಮಯಂತಿಯಲ್ಲಿ ನನಗೆ ಪ್ರೇಮವುಂಟು. ಅವಳು ನನ್ನನ್ನು ಪ್ರೀತಿಸುವಂತೆ ಮಾಡು. ಇಲ್ಲವಾದರೆ ಈ ದೇಹದಲ್ಲಿ ಪ್ರಾಣ ಉಳಿಯಲಾರದು. ಎಲೈ ಬಂಧುವೇ, ನೀನು ಬರುವವರೆಗೆ ಇಲ್ಲಿಯೇ ಇರುವೆನು' ಎಂದು ಹೇಳಿ ಅದನ್ನು ಕಳುಹಿಸಿಕೊಟ್ಟನು.

ನಳನಿದ್ದ ವನದಿಂದ ಹೊರಟ ಹಂಸ, ವಿದರ್ಭನಗರಿಗೆ ಬಂದು ಅರಮನೆಯ ಉಪ್ಪರಿಗೆಯ ಮೇಲಿದ್ದ ದಮಯಂತಿಯನ್ನು ಕಂಡಿತು. ಮೋಡದಿಂದ ಮಿಂಚು ಭೂಮಿಗೆ ಇಳಿಯುವಂತೆ ಹಂಸಪಕ್ಷಿ ಆಕಾಶದಿಂದ ಇಳಿದು ದಮಯಂತಿಯ ಮುಂದೆ ಕುಳಿತುಕೊಂಡಿತು. ಆ ಚೆಲುವಾದ ಹಂಸವನ್ನು ಹಿಡಿಯುವ ಮನಸ್ಸಾಗಲು, ದಮಯಂತಿ ಮುಂದೆ ನುಗ್ಗಿದಳು. ಆಗ ಆ ಪಕ್ಷಿ ಮಲ್ಲಿಗೆಯ ಬನವನ್ನು ಹೊಕ್ಕು ತನ್ನನ್ನು ಹಿಂಬಾಲಿಸಿದ ದಮಯಂತಿಗೆ ಈ ರೀತಿ ಹೇಳಿತು. 'ಎಲೌ ಸುಂದರಿ, ನನ್ನನ್ನು ಹಿಡಿಯುವ ಚಪಲವನ್ನು ಬಿಡು. ಆಕಾಶದಲ್ಲಿ ಸಂಚರಿಸುವ ನಾವು ನಿನ್ನ ಕೈಗೆ ಸಿಲುಕುವುದಿಲ್ಲ. ನಾನು ನಳಚಕ್ರವರ್ತಿಯ ಸೇವಕ. ಚೆಲುವಿಕೆಯಲ್ಲಿ ಆತನು ನಳಕೂಬರನಿಗೆ ಸಮಾನ; ನಿನಗೆ ಅವನು ತಕ್ಕ ಗಂಡು. ಅವನು ನಿನಗೆ ಒಲಿಯುವಂತೆ ಮಾಡುತ್ತೇನೆ.' ಹಂಸೆಯ ಮಾತನ್ನು ಕೇಳಿ ದಮಯಂತಿಗೆ ಸಂತೋಷವಾಗಿ ನಾಚಿಕೆಯಿಂದ ತಲೆ ತಗ್ಗಿಸಿದಳು. ದಮಯಂತಿಗೆ ನಳನಲ್ಲಿ ಪ್ರೀತಿಯಿದೆ ಎಂಬುದನ್ನರಿತು ಬಂದು ಪಕ್ಷಿ ಅದನ್ನು ನಳನಿಗೆ ತಿಳಿಸಿತು. ಇತ್ತ ನಳನು ಪರಿವಾರದೊಡನೆ ರಾಜಧಾನಿಗೆ ಹಿಂದಿರುಗಿದನು.

ನಳನ ಚಿಂತೆಯಿಂದ ದಿನದಿನವೂ ದಮಯಂತಿ ಬಾಡತೊಡಗಿದಳು.

ಮಗಳಿಗೆ ಪ್ರಾಯ ಬಂದುದನ್ನರಿತು ಭೀಮರಾಜನು ದಮಯಂತಿಯ ಸ್ವಯಂವರಕ್ಕೆ ಏರ್ಪಡಿಸಿದನು. ನಾನಾದೇಶದ ರಾಜರು ದಮಯಂತಿಯನ್ನು ಮದುವೆಯಾಗುವ ಹಂಬಲದಿಂದ ವಿದರ್ಭನಗರದಲ್ಲಿ ನೆರೆದರು. ಈ ಸಮಾಚಾರ ದೇವೇಂದ್ರನಿಗೆ ನಾರದರಿಂದ ತಿಳಿಯಿತು. ನಾರದನು ಹೊರಟುಹೋದ ಮೇಲೆ ಇಂದ್ರನು ದಮಯಂತಿ ತನ್ನನ್ನು ಒಲಿಯುವಂತೆ ಮಾಡಲು ದೇವತಾಸ್ತ್ರೀಯರನ್ನು ಅವಳಲ್ಲಿಗೆ ಕಳುಹಿಸಿಕೊಟ್ಟನು. ಅನಂತರ ರಥವನ್ನೇರಿ ಯಮ, ವರುಣ, ವಾಯುಗಳೊಡನೆ ಭೂಮಿಗೆ ಬರುತ್ತಿರಲು ದಾರಿಯಲ್ಲಿ ಅವನಿಗೆ ನಳನ ದರ್ಶನವಾಯಿತು. ಸೂರ್ಯನಂತೆ ಕಾಂತಿಯುಳ್ಳ ಇವರನ್ನು ಕಂಡು ನಳನು ಭಕ್ತಿಯಿಂದ ಕೈಮುಗಿದನು. ದೇವತೆಗಳು ಅವನನ್ನು ಕೊಂಡಾಡಿ, ಮನ್ನಿಸಿ 'ನಿನ್ನಿಂದ ನಮಗೊಂದು ಉಪಕಾರವಾಗಬೇಕಾಗಿದೆ. ದಮಯಂತಿ ಸುಂದರಿಯೆಂದು ಕೇಳಿದ್ದೇವೆ. ಹೇಗಾದರೂ ಮಾಡಿ ಅವಳು ನಮಗೆ ಒಲಿವಂತೆ ಮಾಡು' ಎಂದರು. ಈ ಮಾತನ್ನು ಹೇಳಿದವನು ದೇವೇಂದ್ರ. ಇಂದ್ರನ ಮಾತನ್ನು ಕೇಳಿ ನಳನಿಗೆ ಚಿಂತೆಯಾಯಿತು. ತಾನು ಒಲಿದಿದ್ದ ಹೆಣ್ಣನ್ನು ದೇವತೆಗಳಿಗೆ ಒಲಿಯೆಂದು ಹೇಳುವುದು ಹೇಗೆ? ಆದರೆ ದೇವತೆಗಳ ಮಾತನ್ನು ಕೇಳದಿದ್ದರೆ ವಿಧಿಯಿಲ್ಲ. ಹೆಂಗಸರ ಮನಸ್ಸನ್ನು ತಿಳಿಯುವುದು ಕಷ್ಟ, ಆದರೂ ಪ್ರಯತ್ನಮಾಡಿ ನೋಡುತ್ತೇನೆ ಎಂದು ಇಂದ್ರನಿಗೆ ತಿಳಿಸಿ, ನಳನು ವಿದರ್ಭನಗರಿಗೆ ಬಂದು ಅದೃಶ್ಯರೂಪದಿಂದ ಅರಮನೆಯನ್ನು ಹೊಕ್ಕನು.

ಇತ್ತ ಇಂದ್ರನು ಕಳುಹಿಸಿದ ಸುರಸುಂದರಿಯರು ದಮಯಂತಿಯಲ್ಲಿಗೆ ಬಂದು, ಅವಳಿಗೆ ಕಾಣಿಕೆಯನ್ನು ಒಪ್ಪಿಸಿ ಈ ರೀತಿ ಹೇಳಿದರು. 'ತಾಯಿ ದಮಯಂತಿ, ನಿಮ್ಮ ಈ ಚೆಲುವಿಕೆಯನ್ನು ಕೇಳಿ ಇಂದ್ರನು ನಿಮ್ಮನ್ನು ಮೋಹಿಸಿದ್ದಾನೆ. ಈ ವಿಷಯದಲ್ಲಿ ನಿನ್ನ ಮನಸ್ಸನ್ನು ತಿಳಿಯಲು ನಮ್ಮನ್ನು ನಿನ್ನಲ್ಲಿಗೆ ಕಳುಹಿಸಿದ್ದಾನೆ. ಈ ಆಭರಣಗಳನ್ನು ತೊಡು, ದೇವೇಂದ್ರನಿಗೆ ಹೆಂಡತಿಯಾಗು. ಇದು ಮನುಷ್ಯಳಾದ ನಿನಗೊಂದು ಭಾಗ್ಯವಲ್ಲವೆ? ಲೋಕದಲ್ಲಿ ಇಂದ್ರನ ಪದವಿಗಿಂತ ಮಿಗಿಲಾದ ಪದವಿ ಯಾವುದು? ಅಂಥ ದೇವೇಂದ್ರನೇ ನಿನ್ನ ಬಳಿಗೆ ಬರುವುದು ಪುಣ್ಯವಲ್ಲವೆ?' ಅವರ ಮಾತನ್ನು ಕೇಳಿ ದಮಯಂತಿ 'ನನ್ನ ಮನಸ್ಸು ಒಬ್ಬನಲ್ಲಿ ಸಿಲುಕಿದೆ. ಅದನ್ನು ಅಲ್ಲಿಂದ ತೆಗೆಯಲಾರೆ. ಅಲ್ಲದೆ ದೇವೇಂದ್ರ ಮನುಜ ಸತಿಯರಿಗೆ ಆಸೆಪಡುವುದು ದುರಾಶೆ' ಎಂದು ಹೇಳಿ ಅವರನ್ನು ಕಳುಹಿಸಿಬಿಟ್ಟಳು.

ದೇವತಾಸ್ತ್ರೀಯರು ಹೊರಟುಹೋದ ಮೇಲೆ ನಳನು ದಮಯಂತಿ

ಯನ್ನು ನಿಜರೂಪದಿಂದ ಕಾಣಿಸಿಕೊಂಡನು. ನಳನನ್ನು ದಮಯಂತಿ ಉಪಚರಿಸಿ ಬಂದ ಕಾರ್ಯವೇನೆಂದು ಕೇಳಿದಳು. ನಳನು ತಿರುಗಿ ಅದೇ ಹಾಡನ್ನು ಹಾಡಿದನು. ನಳನ ಮಾತನ್ನು ಕೇಳಿ ದಮಯಂತಿ 'ಎಲ್ಲವನ್ನೂ ತಿಳಿದ ನೀವು ಈ ಮಾತನ್ನು ಆಡಬಾರದು. ಇಂದ್ರನ ಮಾತು ಹಾಗಿರಲಿ. ನನಗೆ ನಳನೇ ಗಂಡ. ಈ ಜನ್ಮದಲ್ಲಿ ಬೇರೊಬ್ಬನನ್ನು ಮದುವೆಯಾಗುವುದಿಲ್ಲವೆಂದು ಹಟತೊಟ್ಟಿದ್ದೇನೆ. ನೀವು ದೇವತೆಗಳಂತೆ ಕಾಣುವುದಿಲ್ಲ. ನಿಮ್ಮ ಹೆಸರೇನು? ಎಂದಳು. ನಳನು ಮತ್ತೆ ಹೇಳಿದನು 'ದೂತರಲ್ಲಿ ಕುಲಗೋತ್ರಗಳನ್ನು ಹುಡುಕಬಾರದು. ಇಂದ್ರನು ನಿಮ್ಮನ್ನು ಬಯಸಿದನೆಂದರೆ ಅದೇ ಒಂದು ದೊಡ್ಡ ಪುಣ್ಯ. ಇಂದ್ರನನ್ನು ಕೈಹಿಡಿದು ಸುಖಿಯಾಗು. ಇಂದ್ರನೆಲ್ಲಿ? ನಳನೆಲ್ಲಿ? ಕುಲಪರ್ವತ ನೊರಜಕ್ಕೆ ಸರಿಯೇ? ನಳನು ನಿನಗೆ ಒಲಿಯನು. ಅವನೇನು ರಾಜರಲ್ಲಿ ಶ್ರೇಷ್ಠನೇ?' ಈ ಮಾತು ಕೇಳಿ ದಮಯಂತಿಗೆ ಕೋಪ ಬಂತು. ಅವಳು 'ರಾಜರಲ್ಲಿ ನಳನೇ ಶ್ರೇಷ್ಠ. ಅತ್ಯಂತ ಗುಣಶಾಲಿ. ಅವನಿಗೆ ಸಮಾನರು ಮೂರು ಲೋಕದಲ್ಲಿಲ್ಲ. ನಳನೇ ಗಂಡ ಎಂದು ನಾನು ಮನಸ್ಸಿನಲ್ಲಿ ನಿರ್ಧರಿಸಿದ್ದೇನೆ. ಅವನ ಕರುಣೆ, ದಯೆ ನನ್ನ ಮೇಲೆ ಬಾರದಿದ್ದರೆ ನನಗೆ ಮರಣವೇ ಶರಣು. ಇದು ಸತ್ಯ' ಎಂದಳು.

ಈ ಮಾತುಗಳನ್ನು ಹೇಳುತ್ತ ದಮಯಂತಿ ಕಣ್ಣೀರು ಮಿಡಿದಳು. ಅವಳ ನಿಶ್ಚಯವನ್ನು ಕಂಡು ನಳನ ಎದೆ ಕರಗಿತು. 'ನಾನೇ ನಳ. ಈಗ ನಾನು ದೇವದೂತನಾಗಿ ಬಂದಿದ್ದೇನೆ. ನಿನಗೆ ನನ್ನ ಗುರುತು ಬೇಕಾದರೆ ಹಂಸದ ರಾಯಭಾರವನ್ನು ನೆನೆ' ಎಂದು ಅವನು ಅವಳಿಗೆ ಹೇಳಿದನು. ನಾಚಿಕೆಯಿಂದ ದಮಯಂತಿ ಒಳಗೆ ಹೋಗಲು ನಳನ ದೂತಕಾರ್ಯ ಅಲ್ಲಿಗೆ ಮುಗಿಯಿತು. ದೇವತೆಗಳ ಬಳಿಗೆ ಬಂದು ನಡೆದ ವಿಷಯವನ್ನು ಅವರಿಗೆ ತಿಳಿಸಿಬಿಟ್ಟನು.

ದಮಯಂತಿಯ ಸ್ವಯಂವರದ ದಿನ ಹತ್ತಿರ ಬಂತು. ಅಂದು ಇಂದ್ರ, ಯಮ, ವರುಣ, ವಾಯುಗಳು ನಳನ ರೂಪವನ್ನೇ ಧರಿಸಿ ರಾಜಕುಮಾರರ ಸಾಲಿನಲ್ಲಿ ಕುಳಿತುಬಿಟ್ಟರು. ದಮಯಂತಿ ಮಂಗಳಸ್ನಾನ ಮಾಡಿ, ಅಲಂಕರಿಸಿಕೊಂಡು ಸ್ವಯಂವರ ಮಂಟಪಕ್ಕೆ ಬಂದು ನೋಡುತ್ತಾಳೆ! ಒಂದೇ ಕಡೆ ಐವರು ನಳರಿದ್ದಾರೆ! ಆಕೆಗೆ ಚಿಂತೆಯಾಯಿತು. ಸರಸ್ವತಿಯ ಅಪ್ಪಣೆಯಂತೆ ದಮಯಂತಿ ಇಂದ್ರಾದಿಗಳಿಗೆ 'ದೇವಕುಲ ಸಂಭವರೆ, ನೀವು ನನ್ನನ್ನು ಮಗಳೆಂದು ತಿಳಿದು ಪಾಲಿಸಿರಿ' ಎಂದು ಬೇಡಿಕೊಂಡಳು. ದೇವತೆಗಳಿಗೆ ಕರುಣೆ ಹುಟ್ಟಿ ನಿಜರೂಪದಿಂದ ಅವಳಿಗೆ ಪ್ರಸನ್ನರಾದರು. ದಮಯಂತಿ

ನಳನನ್ನು ವರಿಸಿದಳು. ಅವರಿಬ್ಬರ ಮದುವೆ ಬಹು ವೈಭವದಿಂದ ನೆರವೇರಿತು. ಭೀಮನೃಪಾಲನು ಮಗಳು ಮತ್ತು ಅಳಿಯನನ್ನು ಮನ್ನಿಸಿ, ಉಡುಗೊರೆ ಕೊಟ್ಟು ಅವರನ್ನು ನಿಷಧಪಟ್ಟಣಕ್ಕೆ ಕಳುಹಿಸಿಕೊಟ್ಟನು. ಕಾಲಕ್ರಮದಲ್ಲಿ ನಳ ದಮಯಂತಿಯರಿಗೆ ಒಬ್ಬ ಮಗನೂ, ಒಬ್ಬ ಮಗಳೂ ಹುಟ್ಟಿದರು.

ಇತ್ತ ದಮಯಂತಿಯ ಸ್ವಯಂವರವನ್ನು ಮುಗಿಸಿಕೊಂಡು ಅಮರಾವತಿಗೆ ಹೊರಟ ಇಂದ್ರಾದಿಗಳು ದಾರಿಯಲ್ಲಿ ಕಲಿಪುರುಷನನ್ನು ಸಂಧಿಸಿದರು. ಅವರ ಬಾಯಲ್ಲಿ ನಳ ದಮಯಂತಿಯರ ಗುಣಗಾನವೇ. ಅವರು ದಮಯಂತಿಗೆ ನಳನನ್ನು ಮದುವೆ ಮಾಡಿಸಿ ಬಂದೆವೆನಲು ಕಲಿಪುರುಷನ ಕೋಪ ಉರಿದೆದ್ದಿತು. ಕಲಿ ದೇವತೆಗಳನ್ನು ಕುರಿತು 'ನೀವು ದೇವತೆಗಳು, ಶೂರರು. ಆದರೂ ದಮಯಂತಿಯನ್ನು ಮದುವೆಯಾಗುವ ಯೋಗ್ಯತೆ ನಿಮಗುಂಟಾಗಲಿಲ್ಲ. ನನ್ನನ್ನು ಕಳುಹಿಸಿ. ನಿಮ್ಮ ಮನಸ್ಸಿನ ಬಯಕೆಯನ್ನು ಸಲ್ಲಿಸುತ್ತೇನೆ. ನಾನು ಹಟ ಹಿಡಿಯುವುದಿಲ್ಲ; ಹಿಡಿದರೆ ಅದನ್ನು ಕೊನೆ ಮುಟ್ಟಿಸುತ್ತೇನೆ. ನೀವು ನೋಡುತ್ತಿರುವಂತೆಯೇ ನಳನನ್ನು ಅಡವಿಗಟ್ಟುತ್ತೇನೆ. ಇದು ಸತ್ಯವಾದ ಮಾತು' ಎಂದನು. ಕಲಿಯ ಮಾತನ್ನು ಕೇಳಿ ದೇವತೆಗಳು ಮರುಗಿದರು. ಅವನು ಮಾಡುವ ಕೆಲಸ ಅಯೋಗ್ಯ ಎಂದರು. ಆದರೂ ಅವರ ಮಾತನ್ನು ಕೇಳದೆ ಅವನು ನಿಷಧಪಟ್ಟಣಕ್ಕೆ ಬಂದನು.

ನಳನ ರಾಜ್ಯ ರಾಮರಾಜ್ಯವಾಗಿತ್ತು. ಅಲ್ಲಿ ಅಧರ್ಮಕ್ಕೆ ಸುಳಿವಿರಲಿಲ್ಲ. ಆದ್ದರಿಂದ ಕಲಿ ತನ್ನ ಕಾರ್ಯಸಾಧನೆಗಾಗಿ ಬಹುಕಾಲ ಕಳೆಯಬೇಕಾಯಿತು. ಒಂದು ದಿನ ನಳನು ಆಚಮನ ಮಾಡದೆ ನೀರನ್ನು ಕುಡಿಯಲು, ತನ್ನ ಕೆಲಸಕ್ಕೆ ಅನುಕೂಲ ಸಮಯಬಂದಿತೆಂದು ಹಿಗ್ಗಿದನು. ಕೂಡಲೇ ಕಲಿ ಬ್ರಾಹ್ಮಣವೇಷದಿಂದ ನಳನ ತಮ್ಮನಾದ ಪುಷ್ಕರನ ಬಳಿಗೆ ಬಂದು 'ಪುಷ್ಕರನೆ, ನನ್ನನ್ನು ಸಾಮಾನ್ಯನೆಂದು ತಿಳಿಯಬೇಡ. ನಾನು ಕಲಿಪುರುಷ. ನಳನೊಡನೆ ನೀನು ಜೂಜಾಡು. ಅಪಯಶಕ್ಕೆ ಹೆದರಬೇಡ. ಜೂಜಿನಲ್ಲಿ ನಿನ್ನನ್ನು ಗೆಲ್ಲಿಸಿ ಸಕಲ ರಾಜ್ಯಕ್ಕೆ ಒಡೆಯನನ್ನಾಗಿ ಮಾಡುವೆನು. ನನ್ನ ಮಾತಿಗೆ ಒಲ್ಲೆ ಎನ್ನಬೇಡ' ಎಂದು ಅವನನ್ನು ಪ್ರೋತ್ಸಾಹಿಸಿದನು.

ಕಲಿಪುರುಷನ ಮಾತಿನಲ್ಲಿ ಪುಷ್ಕರನಿಗೆ ನಂಬಿಕೆ ಹುಟ್ಟಿತು. ಕಲಿಯೊಡನೆ ನಳನಲ್ಲಿಗೆ ಬಂದು ಪುಷ್ಕರನೆಂದನು: 'ರಾಜನೇ ಕೇಳು, ಈ ಬ್ರಾಹ್ಮಣನು ನನಗೆರಡು ದಾಳಗಳನ್ನು ಕೊಟ್ಟಿದ್ದಾನೆ. ಜೂಜಾಡಲು ನನಗೆ ಮನಸ್ಸಾಗಿದೆ. ಹಾಸನ್ನು ಹಾಸು, ಜೂಜಾಡೋಣ. ಸೋತವರು ಗೆದ್ದವರಿಗೆ ರಾಜ್ಯವನ್ನು ಒಪ್ಪಿಸಿ ಹೆಂಡತಿಯೊಡನೆ ಕಾಡಿಗೆ ಹೋಗುವುದೇ ಪಣ. ಜೂಜಾಡುವುದು

ರಾಜಧರ್ಮ. ಯುದ್ಧಕ್ಕೆ, ಬೇಟೆಗೆ, ಜೂಜಿಗೆ ಕರೆದರೆ ಹಿಂದೆಗೆಯುವುದು ರಾಜನೀತಿಯಲ್ಲ.'

ನಳನಿಗೆ ಗ್ರಹಚಾರ ಚೆನ್ನಾಗಿರಲಿಲ್ಲ. ಪುಷ್ಕರನೊಡನೆ ಜೂಜಾಡಲು ಒಪ್ಪಿದನು. ಕಲಿಮಹಿಮೆಯಿಂದ ನಳನು ಜೂಜಿನಲ್ಲಿ ಎಲ್ಲವನ್ನೂ ಪುಷ್ಕರನಿಗೆ ಸೋತನು. ಈ ಸಮಾಚಾರ ದಮಯಂತಿಗೆ ತಿಳಿಯಿತು. ಆದರೆ ಮಾಡುವುದೇನು? ಈ ವೀರರಮಣಿ, ನಳನ ಕಷ್ಟಕಾಲದಲ್ಲಿ ಆತನಿಗೆ ಸತ್ಯವನ್ನು ಬಿಡಬೇಡ ಎಂದು ಧೈರ್ಯ ಹೇಳಿದಳು. ಮಕ್ಕಳನ್ನು ದಮಯಂತಿ ಆಪ್ತರೊಡನೆ ರಥದಲ್ಲಿ ಕೂರಿಸಿ ತಂದೆಯ ಪಟ್ಟಣಕ್ಕೆ ಕಳುಹಿಸಿಕೊಟ್ಟಳು. ಬಳಿಕ ನಳ ದಮಯಂತಿಯರು ಎಲ್ಲವನ್ನೂ ಪುಷ್ಕರನಿಗೆ ಒಪ್ಪಿಸಿ ವಸ್ತ್ರಾಭರಣಗಳನ್ನು ತೆಗೆದುಬಿಟ್ಟು ಪಟ್ಟಣಿಗರು ಗೋಳಿಡುತ್ತಿರಲು ಕಾಡಿಗೆ ಹೊರಟರು.

ನಳದಮಯಂತಿಯರು ಬಹು ದೂರ ಕಾಡಿನಲ್ಲಿ ನಡೆದರು. ದಮಯಂತಿಯ ಕಾಲೊಡೆದು ರಕ್ತ ಹರಿಯಿತು. ಬಳಲಿದ ಹೆಂಡತಿಯ ಕಷ್ಟವನ್ನು ಕಂಡು ನಳನು ಮರುಗಿದನು. ಹಂಸತಲ್ಪತೂಲಿಕದಲ್ಲಿ ಮಲಗುವ ಕೋಮಲೆಗೆ ಈ ವಿಧಿಯೇ ಎಂದು ಅರಸ ಎದೆಗುಂದಿದನು. ಆದರೆ ದಮಯಂತಿ ಧೈರ್ಯಗೆಡದೆ ಗಂಡನನ್ನು ಸಮಾಧಾನಪಡಿಸಿದಳು. ವಿಧಿ ಬರೆದ ಬರಹವನ್ನು ತಪ್ಪಿಸಲು ಯಾರಿಗೆ ಸಾಧ್ಯ? ಬ್ರಹ್ಮಾದಿಗಳೇ ಕಷ್ಟಪಟ್ಟರು. ಇನ್ನು ನಮ್ಮ ಪಾಡೇನು? ಎಂದು ದಮಯಂತಿ ಧೈರ್ಯ ತಾಳಿದಳು.

ಅಷ್ಟರಲ್ಲೇ ನಳನಿಗೆ ಮತ್ತೊಂದು ಕಷ್ಟ ಒದಗಿತು. ಗಂಡಹೆಂಡಿರು ಒಬ್ಬರನ್ನೊಬ್ಬರು ಸಂತೈಸುತ್ತ ಕಾಡಿನಲ್ಲಿ ಬರುತ್ತಿರಲು ಎರಡು ಜಗನ್ಮೋಹನ ಪಕ್ಷಿಗಳು ನಳನುಟ್ಟಿದ್ದ ಬಟ್ಟೆಯನ್ನು ಎತ್ತಿಕೊಂಡು ಮಾಯವಾದವು. ನಳನು ನಾಚಿಕೆಯಿಂದ ಬೆತ್ತಲೆ ನಿಂತನು. ಅವನಿಗೊದಗಿದ ಗತಿಯನ್ನು ಕಂಡು, ದಮಯಂತಿ ಮರುಗಿ, ತಾನುಟ್ಟಿದ್ದ ಸೀರೆಯ ಸೆರಗನ್ನು ಹರಿದು ನಳನಿಗೆ ಉಡಲು ಕೊಟ್ಟಳು. ದುಃಖದಿಂದ ನಳನು ದಮಯಂತಿಗೆ 'ಇದುವರೆಗೂ ನನ್ನನ್ನು ಅರಮನೆಯಲ್ಲಿ ನೋಡುವ ಭಾಗ್ಯಕ್ಕಾಗಿ ಎಲ್ಲಾ ರಾಜರೂ ಆತುರಪಡುತ್ತಿದ್ದರು. ಈಗ ನನಗೆ ಸಂಪತ್ತೆಲ್ಲ ಹೋಯಿತು. ಹೆಂಡತಿಯ ಸೀರೆಯ ಸೆರಗನ್ನುಡುವ ಗತಿ ಬಂದಿತೇ? ಅಯ್ಯೋ, ನಂಬಿದ ಹೆಂಡತಿಯನ್ನು ಕಾಡಿನ ನಡುವೆ ಬಳಲಿಸಿ ನೋಯಿಸುವಂತಾಯಿತು. ಆದ್ದರಿಂದ ಪ್ರಿಯೆ, ನೀನು ಈ ಕಷ್ಟವನ್ನು ಸಹಿಸಲಾರೆ. ನೀನು ತಂದೆಯ ಮನೆಗೆ ಹೋಗಿ ಅಲ್ಲಿ ಸುಖವಾಗಿರು' ಎಂದು ನೊಂದು ನುಡಿದನು.

ನಳನ ಮಾತನ್ನು ಕೇಳಿ ದಮಯಂತಿಗೆ ಸಂಕಟವಾಯಿತು. ಜೊತೆಗೆ

ಕೋಪವೂ ಬಂತು. 'ರಾಜ, ನೀನೇ ಹೀಗೆ ಮಾತನಾಡಿದರೆ ನನಗಾರು ಗತಿ? ದಿನದಿನವೂ ನಿಮ್ಮ ಪಾದಸೇವೆ ಮಾಡುತ್ತಿದ್ದ ನನಗೆ ಅದು ತಪ್ಪಿದರೆ ಹೇಗೆ ತಾನೆ ಜೀವದಿಂದ ಬದುಕಲಿ? ದೇಹದ ಹಿಂದೆ ನೆಳಲು ಬರುವುದು ಸ್ವಾಭಾವಿಕ. ನೀನು ಅಡವಿಯಲ್ಲಿದ್ದರೆ ಅದೇ ನನಗೆ ಸಾಮ್ರಾಜ್ಯ' ಎಂದು ನೊಂದು ನುಡಿದಳು. ನಳನು ದಮಯಂತಿಯ ಮಾತನ್ನು ಕೇಳಿ ಅವಳನ್ನು ಸಮಾಧಾನಮಾಡಿದನು. ಅಷ್ಟರಲ್ಲೇ ಕತ್ತಲಾಯಿತು.

'ದಮಯಂತಿ ಮಹಾಪತಿವ್ರತೆ. ನನ್ನನ್ನು ಬಿಟ್ಟಿರಲು ಅವಳಿಗೆ ಮನಸ್ಸೇ ಬಾರದು. ಈಗ ನಾನು ಇವಳನ್ನು ಬಿಟ್ಟುಹೋದರೆ, ತಂದೆಯ ಮನೆಗೆ ಹೋಗುತ್ತಾಳೆ. ಇವಳಿಂದ ಪಾರಾಗಲು ಇದೇ ಉಪಾಯ' ಎಂದು ಯೋಚಿಸಿ ಅರಸನು ದಮಯಂತಿಯನ್ನು ನಿದ್ರೆಮಾಡಿಸಿದನು. ಅವಳಿಗೆ ಗಾಢ ವಾದ ನಿದ್ರೆ ಬರಲು ರಾಜನು ಮೆಲ್ಲಗೆ ಅಲ್ಲಿಂದ ಜಾರಿ ಮುಂದೆ ನಡೆದನು. ಆಗ ನಳನ ಮನಸ್ಸು ಅವನ ಹಿಡಿತದಲ್ಲೇ ಇರಲಿಲ್ಲ. ಒಮ್ಮೆ ಹಿಂದಿರುಗಿ ನೋಡುವನು. ಒಮ್ಮೆ ನಿಂತಲ್ಲೇ ನಿಲ್ಲುವನು. ಒಮ್ಮೆ ಅವಳಿಗಾಗಿ ಮರುಗು ವನು. ಕೊನೆಗೆ ದೇವರೇ, ನೀನೆ ಗತಿ ಎಂದುಕೊಂಡು ಮುಂದೆ ಸಾಗಿದನು.

ಬೆಳಗೆ ಬೆಳಗಾಯಿತು. ದಮಯಂತಿ ಎದ್ದು ಮೈಮುರಿದು ಕಣ್ಣು ಬಿಟ್ಟು ಸುತ್ತಲೂ ನೋಡುತ್ತಾಳೆ! ನಳನಿಲ್ಲ. ದಮಯಂತಿಗೆ ಹೆದರಿಕೆ ಯಾಯಿತು. ಅವನಿಗಾಗಿ ಹಲುಬಿದಳು. ಆದರೆ ಏನು ಉಪಯೋಗ? ಗಂಡನಿಗಾಗಿ ಹಂಬಲಿಸುತ್ತ, ಅವನನ್ನು ಹುಡುಕುತ್ತ ಕಾಡಿನಲ್ಲಿ ಬರು ತ್ತಿರಲು ಅವಳಿಗೆ ಮತ್ತೊಂದು ಕಷ್ಟ ಬಂದೊದಗಿತು. ಕಾಡಿನಲ್ಲಿ ತರಗೆಲೆಗಳ ನಡುವೆ ಹೆಬ್ಬಾವೊಂದು ಸುಖವಾಗಿ ಮಲಗಿ ನಿದ್ರಿಸುತ್ತಿತ್ತು. ದಮಯಂತಿ ಕಾಣದೆ ಅದನ್ನು ಮೆಟ್ಟಲು ಹೆಬ್ಬಾವು ಕೋಪದಿಂದ ಅವಳನ್ನು ನುಂಗಲು ಮೊದಲು ಮಾಡಿತು. 'ಅಯ್ಯೋ, ನನಗೆ ಎಂಥ ಗತಿ ಬಂತು! ನಳನೇ, ನನ್ನನ್ನು ಯಾರಿಗೆ ಒಪ್ಪಿಸಿದೆ? ಕಾಡಿನಲ್ಲಿ ಒಂದು ಕ್ರೂರಸರ್ಪದ ಬಾಯಿಗೆ ತುತ್ತಾಗಬೇಕಾಯಿತೆ? ಕೃಷ್ಣ' ಎಂದು ದಮಯಂತಿ ದೇವರಲ್ಲಿ ಮೊರೆ ಯಿಟ್ಟಳು. ಬೆಟ್ಟದ ತುದಿಯಲ್ಲಿದ್ದ ಬೇಡನೊಬ್ಬನು ಈ ಧ್ವನಿಯನ್ನು ಕೇಳಿ ಬೇಗ ಬಂದು ಆಕೆಯನ್ನು ಬಿಡಿಸಿದನು. ಅನಂತರ ದಮಯಂತಿ ಕೊಳದಲ್ಲಿ ಮಿಂದು ಶುಚಿಯಾದಳು. ಆಕೆಯ ರೂಪವನ್ನು ನೋಡಿ ಮನಸೋತ ಬೇಡನು 'ಸುಂದರಿ, ನೀನು ನನಗೆ ಹೆಂಡತಿಯಾಗು' ಎಂದು ಬೇಡಿದನು. ಕೋಪದಿಂದ ದಮಯಂತಿ 'ನೀನು ನನ್ನ ಪ್ರಾಣವನ್ನು ಉಳಿಸಿದ ಕಾರಣ ತಂದೆಗೆ ಸಮಾನ. ಸುಮ್ಮನೆ ಹೋಗು, ಹೆಚ್ಚು ಮಾತನಾಡಿದರೆ ಶಾಪ

ಕೊಡುತ್ತೇನೆ' ಎಂದಳು. ಬೇಡನು ಹೆದರಿ ಆಕೆಗೆ ತಲೆಬಾಗಿ ಹೊರಟು ಹೋದನು.

ಬೇಡನು ಹೊರಟುಹೋದ ಮೇಲೆ, ದಮಯಂತಿ ಕಣ್ಣೀರು ಮಿಡಿಯುತ್ತ ನಳನಿಗಾಗಿ ಹಂಬಲಿಸುತ್ತ ಕಾಡಿನಲ್ಲಿ ನಡೆದಳು. ಅವಳನ್ನು ಕಾಣುತ್ತಲೇ ಭೂತಭೇತಾಳಗಳು ಓಡಿಹೋದವು. ಕ್ರೂರಮೃಗಗಳು ಹಿಂದೆ ಸರಿದವು. ಮುಂದೆ ಹೋಗುತ್ತಿದ್ದಾಗ ಅವಳಿಗೆ ಋಷಿಗಳು ಕಾಣಿಸಿದರು. ದಮಯಂತಿಯ ಕಥೆ ಕೇಳಿ ಎದೆ ಕರಗಿ ಅವರು 'ತಾಯೆ, ಕಂಗೆಡಬೇಡ. ಬಹು ಬೇಗ ನೀನು ಗಂಡನನ್ನೂ ಮಕ್ಕಳನ್ನೂ ಕೂಡುವೆ. ಹಿಂದಿನ ಸಂಪತ್ತು ನಿನಗೆ ಮರಳಿ ಬರುವುದು' ಎಂದು ಹೇಳಿ ಮಾಯವಾದರು.

ಕನಸಿನಂತೆ ನಡೆದ ಈ ವಿಷಯವನ್ನು ಚಿಂತಿಸುತ್ತ ದಮಯಂತಿ ಬರುತ್ತಿರಲು, ವೈಶ್ಯರು ಆಕೆಗೆ ಕಾಣಿಸಿಕೊಂಡರು. ವನಲಕ್ಷ್ಮಿಯಂತಿದ್ದ ಆಕೆಯನ್ನು ಕಂಡು ಭೂತವೆಂದು ಭಾವಿಸಿ ಅವರು ಓಡತೊಡಗಿದರು. ಅವರ ಹೇಡಿತನವನ್ನು ಕಂಡು ದಮಯಂತಿಗೆ ನಗುಬಂತು. ಒಡನೆಯೇ ಅವಳು ಅವರಲ್ಲಿಗೆ ಹೋಗಿ "ನಾನು ಭೂತವಲ್ಲ. ನನ್ನಿಂದ ನಿಮಗೆ ಕೇಡಿಲ್ಲ. ನಳನೃಪನ ಹೆಂಡತಿ ದಮಯಂತಿ ನಾನು. ಗಂಡನಿಂದ ಅಗಲಿದ್ದೇನೆ. ದಾರಿ ತಪ್ಪಿದ ಪರದೇಶಿಗೆ ದಾರಿ ತೋರಿ" ಎಂದು ಕಣ್ಣೀರು ತುಂಬಿದಳು.

ದಮಯಂತಿಯ ಮಾತು ಕೇಳಿ ವೈಶ್ಯರಿಗೆ ಧೈರ್ಯವಾಯಿತು. ಅಷ್ಟರಲ್ಲೇ ಕತ್ತಲಾಯಿತು. ರಾತ್ರಿಯ ದೀಪವೆಂಬಂತೆ ಆಕಾಶದಲ್ಲಿ ಚಂದ್ರನು ಮೂಡಿ ಬಂದನು. ಆ ವ್ಯಾಪಾರಿಗಳು ಆ ರಾತ್ರಿ ಅಲ್ಲೇ ಬೀಡಾರ ಮಾಡಿ ಮಲಗಿರಲು, ಕಾಡಾನೆಗಳು ಮದಿಸಿ ಓಡಿ ಬಂದು ಇವರನ್ನು ಕೊಲ್ಲತೊಡಗಿದವು. ಆಗ ವೈಶ್ಯ ಕುಲತಿಲಕನಿಗೆ ದಮಯಂತಿಯನ್ನು ಕಾಪಾಡುವ ಚಿಂತೆ ಬಲವಾಯಿತು. ತಮಗೊದಗಿದ ಕಷ್ಟವನ್ನು ನೋಡಿ, ದಮಯಂತಿ ಕಣ್ಮುಚ್ಚಿ ಭಕ್ತಿಯಿಂದ "ವನಜನಾಭ, ಮುಕುಂದ, ಸಲಹು" ಎಂದು ಧ್ಯಾನಿಸಿದಳು. ದಮಯಂತಿಯ ಮಹಿಮೆಯನ್ನು ಏನೆಂದು ಹೇಳುವುದು? ಕೂಡಲೇ ಆನೆಗಳು ಕಾಡಿನೊಳಗೆ ಓಡಿಹೋದವು. ರಾತ್ರಿಯನ್ನು ಅವರೆಲ್ಲ ಸುಖ ನಿದ್ರೆಯಲ್ಲಿ ಕಳೆದರು.

ಮಾರನೆಯ ದಿನ ದಮಯಂತಿ ವೈಶ್ಯರೊಡನೆ ಚೇದಿ ಪಟ್ಟಣವನ್ನು ಹೊಕ್ಕಳು. ಅವಳ ರೂಪವನ್ನು ಕಂಡು ಊರಿಗೆ ಊರೇ ಬೆರಗಾಯಿತು. ಉಪ್ಪರಿಗೆಯ ಮೇಲಿದ್ದು, ಚೇದಿ ರಾಜನ ಹೆಂಡತಿ ದಮಯಂತಿಯನ್ನು ತನ್ನ ಬಳಿಗೆ ಕರೆಸಿಕೊಂಡು, ಆಕೆಯ ಸಮಾಚಾರವನ್ನು ಕೇಳಿದಳು.

ದಮಯಂತಿ ನಿಟ್ಟುಸಿರು ಬಿಟ್ಟು ರಾಣಿಗೆ "ನನ್ನ ಗಂಡ ಜೂಜಿನಲ್ಲಿ ರಾಜ್ಯವನ್ನು ಸೋತು, ಕಾಡಿನಲ್ಲಿ ನನ್ನನ್ನು ಅಗಲಿದನು. ನನಗೆ ಹಿತ ಬಯಸುವವರು ಮತ್ತೊಬ್ಬರಿಲ್ಲ. ಪರದೇಶಿಯಾದ ನನ್ನನ್ನು ಕಾಪಾಡಿ" ಎಂದು ಬೇಡಿಕೊಂಡಳು. ದಮಯಂತಿಯ ಮಾತನ್ನು ಕೇಳಿ, ರಾಣಿ ಆಕೆಯನ್ನು ಸಮಾಧಾನಪಡಿಸಿ, ತನ್ನ ಮಗಳಾದ ಸುನೀತಿಯ ಮನೆಯಲ್ಲಿ ಸೈರಂಧ್ರಿಯಾಗಿರುವಂತೆ ನಿಯಮಿಸಿದಳು. ದಮಯಂತಿಯ ಮನಸ್ಸಿಗೆ ಶಾಂತಿಯೊದಗಿತು. ನಳನನ್ನೇ ಚಿಂತಿಸುತ್ತ ಆಕೆ ಚೈದ್ಯನಗರಿಯಲ್ಲಿ ಕಾಲ ಕಳೆಯತೊಡಗಿದಳು.

ಇತ್ತ ನಳನು ನಿದ್ರಿಸುತ್ತಿದ್ದ ದಮಯಂತಿಯನ್ನು ಅಡವಿಯಲ್ಲೇ ಬಿಟ್ಟು ಮುಂದೆ ಹೊರಟನಷ್ಟೆ. ಅವನ ಮನಸ್ಸು ಮಾತ್ರ ಅವನ ಹಿಡಿತದಲ್ಲೇ ಇರಲಿಲ್ಲ. ನಾನಾ ರೀತಿಯ ಯೋಚನೆಗಳು ಅವನ ಮನಸ್ಸನ್ನು ಕಿತ್ತು ತಿನ್ನುತ್ತಿದ್ದವು. "ದಮಯಂತಿ ಸುಖವಾಗಿ ಮಲಗಿರುವಳೋ, ಅಧೈರ್ಯದಿಂದ ನನ್ನನ್ನು ನೆನೆಯುವಳೋ, ಇಲ್ಲವೆ ಕನಸನ್ನು ಕಂಡು ಶೋಕಪಡುವಳೋ, ನನಗಾಗಿ ಹಂಬಲಿಸಿ ಪ್ರಾಣಬಿಡುವಳೋ ತಿಳಿಯದಲ್ಲ! ಅಯ್ಯೋ, ನನ್ನಂಥ ಮೂರ್ಖ ಈ ಲೋಕದಲ್ಲಿ ಉಂಟೇ? ಹೆತ್ತ ಮಕ್ಕಳನ್ನು ಪರರ ಮನೆಗೆ ನೂಕಿದೆ. ನಂಬಿದ ಹೆಂಡತಿಯನ್ನು ಕಾಡಿನಲ್ಲಿ ಮಲಗಿಸಿ ಬಂದೆ. ದಮಯಂತಿ ಎಂತಹ ಉತ್ತಮ ಸ್ತ್ರೀ! ಲೋಕದಲ್ಲಿ ತನ್ನನ್ನು ಕೈಹಿಡಿಯಲು ಆತುರರಾಗಿದ್ದ ಅನೇಕ ರಾಜರನ್ನು ತಿರಸ್ಕರಿಸಿ, ಆಕೆ ನನ್ನನ್ನು ಮದುವೆಯಾದಳು. ಆಕೆಯನ್ನು ವಂಚಿಸಿದ ಪಾಪಿ ನಾನು. ಭೂಮಿಯಲ್ಲಿ ನಾನಿನ್ನು ಬದುಕಿರಬೇಕೆ?"

ಹೀಗೆಂದು ಯೋಚಿಸುತ್ತ ನಳನು ಮುಂದೆ ನಡೆದು ಬರಲು, ಎದುರಿಗೆ ಕಾಡುಕಿಚ್ಚು ಕಾಣಿಸಿತು. ವನವನ್ನೇ ಸುಟ್ಟು ಬೂದಿ ಮಾಡುತ್ತಿದ್ದ ಆ ಕಾಡಿನಲ್ಲಿ ಸತ್ತ ಪ್ರಾಣಿಗಳ ಲೆಕ್ಕವನ್ನು ದೇವರೇ ಬಲ್ಲ! ಆ ಕಾಡುಕಿಚ್ಚಿನ ನಡುವೆ "ರಾಜ, ಬೆಂಕಿಯಲ್ಲಿ ಸಿಕ್ಕಿಬಿದ್ದಿರುವ ನನ್ನನ್ನು ಬದುಕಿಸು. ತಡ ಮಾಡಿದರೆ ನನಗೆ ಸಾವು ಸಿದ್ಧ. ಈ ಕಾರ್ಯದಿಂದ ನಿನಗೆ ಪುಣ್ಯ ಬರುತ್ತದೆ" ಎಂಬ ಧ್ವನಿ ಕೇಳಿಸಿತು. ಶಬ್ದ ಕೇಳಿ ಬಂದ ಸ್ಥಳಕ್ಕೆ ನಳನು ಬೇಗ ಬಂದು ಕಿಚ್ಚಿನ ನಡುವಿದ್ದ ಸರ್ಪವನ್ನು ಕಂಡು ನೀನಾರೆಂದು ಕೇಳಿದನು. ಅದಕ್ಕೆ ಸರ್ಪ ಉತ್ತರ ಕೊಟ್ಟಿತು. "ರಾಜ, ನನ್ನ ಹೆಸರು ಕಾರ್ಕೋಟಕನೆಂದು. ಸರ್ಪಗಳ ಒಡೆಯ ನಾನು. ಒಮ್ಮೆ ಋಷಿಯೊಬ್ಬನು ನನ್ನನ್ನು ತಾಗಿದನು. ನನ್ನನ್ನು ಕಂಡು ಹೆದರಿದ ಆತ ಕೋಪದಿಂದ ಬಿದ್ದಲ್ಲಿಯೇ ಬಿದ್ದಿರು ಎಂದು ಶಾಪಕೊಟ್ಟನು. ಮರುಕ್ಷಣದಲ್ಲಿಯೇ ನನ್ನ ಮೇಲೆ ಕನಿಕರಗೊಂಡು, ನಳನು

ಇಲ್ಲಿಗೆ ಬಂದಾಗ ಅವನ ಕೈ ನಿನ್ನ ದೇಹವನ್ನು ತಾಗಲು ಆಗ ನಿನಗೆ ಶಾಪ ಪರಿಹಾರ ಎಂದು ಹೇಳಿ ಹೊರಟುಹೋದನು. ಅಂದಿನಿಂದ ಇಂದಿನವರೆಗೂ ನಿನ್ನ ಬರುವಿಕೆಗಾಗಿ ಕಾಯುತ್ತಿದ್ದೆ. ನನ್ನ ಪುಣ್ಯದಿಂದ ಈಗ ನೀನು ಬಂದೆ. ಈ ಅಗ್ನಿ ಭಯವನ್ನು ತಪ್ಪಿಸಿ ಕಾಪಾಡು."

ಕಾರ್ಕೋಟಕನ ಮಾತನ್ನು ಕೇಳಿ ನಳನ ಎದೆ ಕರಗಿತು. ಕೂಡಲೇ ಅವನು ಹೆದರದೆ ಸರ್ಪವನ್ನು ಬೆಂಕಿಯಿಂದ ತಪ್ಪಿಸಿ ತಂದು ಕೊಳದ ತಡಿಯಲ್ಲಿ ಉಪಚರಿಸಿದನು. ಉಪಕಾರಹೊಂದಿದ ಸರ್ಪ ಸುಮ್ಮನಿರದೆ ನಳನ ಕೈ ಕಚ್ಚಿತು. ತಕ್ಷಣವೇ ಮನ್ಮಥನ ದೇಹದಂತಿದ್ದ ನಳನ ದೇಹ ಕೆಟ್ಟು ವಿಕೃತವಾಯಿತು. 'ಅಯ್ಯೋ, ಹಣೆಯ ಬರಹವನ್ನು ಮೀರುವವರಾರು ? ರತ್ನವೆಂದು ಹಿಡಿಯಹೋದರೆ ಈ ಸರ್ಪ ಭೂರಿ ಕೆಂಡವಾಯಿತು. ಇನ್ನು ಚಿಂತಿಸಿ ಫಲವಿಲ್ಲ. ದೇವರ ದಯೆ ನನ್ನ ಮೇಲಿಲ್ಲ' ಎಂದು ರಾಜನು ಮರುಗಿದನು. ಆಗ ಕಾರ್ಕೋಟಕನು ರಾಜನನ್ನು ಸಂತೈಸುತ್ತ 'ರಾಜ, ಸುಮ್ಮನೆ ಏಕೆ ಕೊರಗುವೆ ? ನಾನು ಕಚ್ಚಿದುದರಿಂದ ನಿನಗೆ ಉಪಕಾರವುಂಟು. ಲೋಕ ನಿನ್ನನ್ನು ಗುರುತಿಸಕೂಡದೆಂದೇ ನಿನ್ನನ್ನು ಕಚ್ಚಿದೆ. ಇಲ್ಲಿಂದ ನೀನು ಅಯೋಧ್ಯೆಗೆ ಹೊರಟು ಅಲ್ಲಿನ ದೊರೆಯಾದ ಋತುಪರ್ಣನನ್ನು ಸೇವಿಸು. ಇದನ್ನು ಹೀನವಾದ ಕೆಲಸವೆಂದು ತಿಳಿಯಬೇಡ. ಅವನಿಗೆ ನೀನು ಅಶ್ವಹೃದಯವನ್ನು ಹೇಳಿಕೊಟ್ಟು ಅವನಿಂದ ಅಕ್ಷಹೃದಯವನ್ನು ತಿಳಿದುಕೊ. ಬಾಹುಕನೆಂಬ ಹೆಸರಿನಿಂದ ಅವನ ರಥವನ್ನು ನಡೆಸು. ಹಿಂದಿನ ರೂಪ ಬೇಕಾದಾಗ ಪಕ್ಷಿಗಳನ್ನು ನೆನೆ. ಅವು ನಿನ್ನ ಬಟ್ಟೆಗಳನ್ನು ಕೊಡಲು ಈ ವಿರೂಪ ಮಾಯವಾಗುವುದು. ಇದಕ್ಕಾಗಿ ಏಕಿಷ್ಟು ಚಿಂತೆ ? ಪೂರ್ವದಲ್ಲಿ ಈಶ್ವರನು ಭಿಕ್ಷೆ ಬೇಡಿದನು. ಕೃಷ್ಣನು ಗೋಪಾಲನಾದನು. ಇಂದ್ರನು ಕಾಡಿನಲ್ಲಿ ನಡೆದನು. ನಿನ್ನ ದುಃಖ ಬೇಗ ಕೊನೆಗಾಣುವುದು. ಪುಷ್ಕರನನ್ನು ಗೆದ್ದು ಹೆಂಡತಿ ಮಕ್ಕಳೊಡನೆ ರಾಜ್ಯವಾಳುವೆ' ಹೀಗೆಂದು ಹೇಳಿ ಕಾರ್ಕೋಟಕನು ಮಾಯವಾದನು.

ಬಳಿಕ ನಳನು ಕಾರ್ಕೋಟಕನ ಮಾತನ್ನು ನೆನೆಯುತ್ತ, ಕಾಡು, ನದಿ, ಪಟ್ಟಣಗಳನ್ನು ದಾಟಿ ಬರುತ್ತ ಅಯೋಧ್ಯೆಗೆ ಬಂದು ಋತುಪರ್ಣನನ್ನು ಕಾಣಿಸಿಕೊಂಡನು. ರಾಜನು ಬಾಹುಕನೆಂದು ಹೆಸರಿಟ್ಟುಕೊಂಡಿದ್ದ ಇವನನ್ನು ಪರೀಕ್ಷಿಸಿ ತನ್ನ ಸಾರಥಿಯನ್ನಾಗಿ ನಿಯಮಿಸಿಕೊಂಡನು.

ಇತ್ತ ಭೀಮನೃಪಾಲನು ನಳನು ರಾಜ್ಯವನ್ನು ಪುಷ್ಕರನಿಗೆ ಸೋತು ಹೆಂಡತಿಯೊಡನೆ ಕಾಡಿಗೆ ಹೋದನೆಂಬ ಸಮಾಚಾರ ಕೇಳಿ ಬಹುವಾಗಿ

ಸಂಕಟಪಟ್ಟನು. ಕಾಡಿನಲ್ಲಿ ದಮಯಂತಿ ಏನಾದಳೋ! ಅಂಥ ಮಗಳನ್ನು ಕಳೆದುಕೊಂಡಮೇಲೆ ಬದುಕಿ ಫಲವೇನು ಎಂದು ಗಂಡ ಹೆಂಡಿರು ಅಗ್ನಿ ಪ್ರವೇಶಮಾಡಲು ಮನಸ್ಸು ಮಾಡಿದರು. ಆಗ 'ರಾಜನೆ, ಚಿಂತೆಯನ್ನು ಬಿಡು. ಪತಿವ್ರತೆಗೆ ಹಾನಿಯುಂಟೇ? ದಮಯಂತಿ ಸುಖವಾಗಿದ್ದಾಳೆ' ಎಂಬ ಆಕಾಶವಾಣಿ ಕೇಳಿಸಿತು. ದೇವರ ಮಾತೇ ಇದೆಂದು ತಿಳಿದು ದಂಪತಿಗಳು ಮರುದಿನ ದಮಯಂತಿಯನ್ನು ಹುಡುಕಲು ನಾನಾ ದೇಶ ಗಳಿಗೆ ದೂತರನ್ನು ಕಳುಹಿಸಿಕೊಟ್ಟರು.

ಆ ಸಮಯದಲ್ಲಿ ಚೈದ್ಯನಗರಿಯಲ್ಲಿ ಯಾಗವೊಂದನ್ನು ರಾಜನು ನಡೆಸು ತ್ತಿದ್ದನು. ಆ ಸಮಾಚಾರ ಕೇಳಿ ಅಲ್ಲಿ ದಮಯಂತಿಯ ಸಮಾಚಾರ ತಿಳಿಯಬಹುದೆಂದು ಸುದೇವನೆಂಬ ಬ್ರಾಹ್ಮಣನು ಅಲ್ಲಿಗೆ ಬಂದನು. ಯಾಗ ಮಂಟಪದಲ್ಲಿ ಸುನಂದೆಯೊಡನಿದ್ದ ಸ್ತ್ರೀಯನ್ನು ನೋಡಿ ಆಕೆ ದಮಯಂತಿಯೇ ಎಂಬ ಅನುಮಾನ ಅವನಲ್ಲಿ ಉಂಟಾಯಿತು. ಮುಗಿಲು ಮುಸುಕಿದ ಚಂದ್ರ ನಂತೆ, ಹೊಗೆಯಿಂದ ಕೂಡಿದ ಪ್ರತಿಮೆಯಂತೆ, ಹಗಲಿನಲ್ಲಿ ಹೊಳೆಯುವ ದೀಪದಂತೆ ಇದ್ದ ದಮಯಂತಿಯ ಬಳಿಗೆ ಸುದೇವ ಬಂದು 'ತಾಯೆ, ನಿಮ್ಮ ಮುಖಕಮಲ ಏಕೆ ಬಾಡಿದೆ? ನಾನು ವಿದರ್ಭಪಟ್ಟಣದಿಂದ ಬಂದಿರುವ ಬ್ರಾಹ್ಮಣ. ನನ್ನ ಹೆಸರು ಸುದೇವ. ನಿಮ್ಮ ತಂದೆ ತಾಯಿ ಮಕ್ಕಳು ಬಾಂಧವರು ಎಲ್ಲ ಸುಖವಾಗಿದ್ದಾರೆ. ನಿಮ್ಮ ವಿಷಯವನ್ನು ಕೇಳಿ ಸಂಕಟ ಪಟ್ಟು ದೊರೆ ನಮ್ಮನ್ನು ಹುಡುಕಲು ಕಳುಹಿಸಿದ್ದಾರೆ. ಇಂದು ನೀವು ದೊರಕಿದ್ದು ನಮ್ಮ ಪುಣ್ಯ' ಎಂದನು. ಸುದೇವನ ಮಾತನ್ನು ಕೇಳಿ ದಮ ಯಂತಿಗೆ ಶೋಕ ಸಂತೋಷಗಳು ಒಂದೇ ಕಾಲದಲ್ಲಿ ಉಂಟಾದವು. ಬಾರಿ ಬಾರಿಗೂ ತನ್ನವರ ಸಮಾಚಾರ ಕೇಳಿ ಆಕೆ ತೃಪ್ತಿಪಟ್ಟುಕೊಂಡಳು.

ಸುದೇವನೊಡನೆ ದಮಯಂತಿ ಮಾತನಾಡುತ್ತಿದ್ದುದನ್ನು ಸುನಂದೆ ತಾಯಿಗೆ ತಿಳಿಸಿದಳು. ರಾಣಿ ಸುದೇವನ ಬಳಿಗೆ ಬಂದು ನೀನಾರೆಂದು ಕೇಳಲು ಅವನು 'ತಾಯೆ, ಭೀಮರಾಜನು ತನ್ನ ಮಗಳು ಗಂಡನೊಡನೆ ಕಾಡಿಗೆ ಹೋದುದನ್ನು ಕೇಳಿ ಶೋಕದಿಂದ ಅವರನ್ನು ಕರೆತರಲು ನನ್ನನ್ನು ಕಳುಹಿ ದನು. ಇಲ್ಲಿಗೆ ಬರಲು ದಮಯಂತಿಯನ್ನು ಕಂಡು ಸಂತೋಷವಾಯಿತು' ಎಂದನು. ಈ ಮಾತನ್ನು ಕೇಳಿ ಆಕೆಗೆ ಒಂದೇ ಕಾಲದಲ್ಲಿ ಸೋಜಿಗ ಸಂಕಟಗಳುಂಟಾದವು. ದಮಯಂತಿಯನ್ನು ತೆಗೆದಪ್ಪಿ, 'ಮಗಳೇ, ನಿನಗೆ ಈ ವಿಧಿ ಬಂತೇ? ಶೋಕವನ್ನು ಬಿಡು. ನಾನು ಭೀಮರಾಜನ ತಂಗಿ. ನನ್ನ ಮನೆಯಲ್ಲಿ ಎಷ್ಟು ನೊಂದೆಯೋ! ನಿನ್ನ ವಿಷಯವನ್ನು ನನಗೆ

ಹೇಳಬಾರದಾಗಿತ್ತೇ? ನೀನು ಸುನಂದೆಗೆ ಸಮ' ಎಂದು ಅವಳನ್ನು ಮನ್ನಿಸಿದಳು. ಈ ವಿಷಯ ರಾಜನಾದ ಸುಬಾಹುವಿಗೂ ತಿಳಿದು ಆತನೂ ದಮಯಂತಿಯನ್ನು ಪ್ರೀತಿಯಿಂದ ಕಂಡನು. ಇಲ್ಲಿಗೆ ದಮಯಂತಿಯ ಅರ್ಧ ಚಿಂತೆ ಹರಿಯಿತು.

ಸುದೇವನು ವಿದರ್ಭಪಟ್ಟಣಕ್ಕೆ ಮರಳಿ ಬಂದು ದಮಯಂತಿ ಚೈದ್ಯ ನಗರದಲ್ಲಿರುವ ಸಮಾಚಾರವನ್ನು ರಾಜನಿಗೆ ತಿಳಿಸಿದನು. ತಕ್ಷಣವೇ ದೊರೆ ದಮಯಂತಿಯನ್ನು ಕರೆತರಲು ಮಂತ್ರಿಗಳನ್ನು ಚೈದ್ಯನಗರಕ್ಕೆ ಕಳುಹಿಸಿದನು. ಒಳ್ಳೆಯ ಮುಹೂರ್ತದಲ್ಲಿ ಸುಬಾಹು, ದಮಯಂತಿಗೆ ಉಡುಗೊರೆಗಳನ್ನು ಕೊಟ್ಟು ಪ್ರೇಮದಿಂದ ಅವಳನ್ನು ತಂದೆಯ ಮನೆಗೆ ಕಳುಹಿಸಿದನು. ದಮಯಂತಿಯನ್ನು ಕಂಡು ತಂದೆತಾಯಿಗಳು ಹಿಗ್ಗಿದರು. ಮಕ್ಕಳು ತಾಯಿಯನ್ನು ಪ್ರೇಮದಿಂದ ಅಪ್ಪಿದರು. ಬಾಂಧವರು ನಲಿದರು. ರಾಜಧಾನಿಗೆ ರಾಜಧಾನಿಯೇ ಸಂತೋಷಸಾಗರದಲ್ಲಿ ಮುಳುಗಿತು.

ತಾಯಿಯ ಮನೆಯನ್ನು ಸೇರಿದ ದಮಯಂತಿ ಅಲ್ಲಿ ಸುಖಿಯಾಗಿರಲಿಲ್ಲ. ಅವಳ ಮನಸ್ಸನ್ನೆಲ್ಲ ನಳನ ಚಿಂತೆಯೇ ಆವರಿಸಿತ್ತು. ತಾಯಿಯೊಡನೆ ತನ್ನ ಸಮಾಚಾರವನ್ನೆಲ್ಲ ತಿಳಿಸಿ, 'ನಳನು ಏನಾದನೋ ತಿಳಿಯದು. ಅವನನ್ನು ಬಿಟ್ಟರೆ ನನಗೆ ಬೇರೆ ಗತಿ ಎಲ್ಲಿ? ಗಂಡನಿಲ್ಲದವಳಿಗೆ ಯಾವ ಭೋಗಗಳೂ ಸಲ್ಲವು. ಸುಖವೂ ಇಲ್ಲ. ಸತಿಯರಿಗೆ ಪತಿಯೇ ದೈವ ಎನ್ನುವುದು ನಿಮಗೆ ತಿಳಿಯದೇ? ಆದ್ದರಿಂದ ನಳನನ್ನು ಹುಡುಕಿಸಿ ಇಲ್ಲಿಗೆ ಕರೆಸಿಕೊಡದಿದ್ದರೆ ಪ್ರಾಣ ಬಿಡುತ್ತೇನೆ' ಎಂದು ತನ್ನ ದುಃಖವನ್ನು ತೋಡಿಕೊಂಡಳು.

ಮಗಳ ಮಾತನ್ನು ಕೇಳಿ ಭೀಮರಾಜನಿಗೆ ಚಿಂತೆಯಾಯಿತು. ಮತ್ತೆ ಬ್ರಾಹ್ಮಣರನ್ನು ಕರೆಸಿ, ಧನಧಾನ್ಯಗಳಿಂದ ಅವರನ್ನು ಮನ್ನಿಸಿ ನಳನನ್ನು ಹುಡುಕಲು ಕಳುಹಿಸಿಕೊಟ್ಟನು. ಅವರು ಹೋಗುವುದಕ್ಕೆ ಮುಂಚೆ ದಮಯಂತಿ ಅವರನ್ನು ಕರೆದು 'ನಳನ ರೂಪದ ಸುಳಿವು ಕಾಣಿಸಿದರೆ ಸಾಕು. ನೀವು ಆತನಿಗೆ ಕಾಡಿನಲ್ಲಿ ಹೆಂಡತಿ ಉಟ್ಟಿದ್ದ ಸೀರೆಯಲ್ಲಿ ಅರ್ಧವನ್ನು ಸೆಳೆದುಕೊಂಡು ಅವಳನ್ನು ಬಿಟ್ಟು ಹೋದವರುಂಟೇ ಎಂಬ ಮಾತನ್ನು ಹೇಳಿ. ಅದಕ್ಕೆ ಆತ ಹೇಳುವ ಉತ್ತರವನ್ನು ತಂದು ನನಗೆ ತಿಳಿಸತಕ್ಕದ್ದು' ಎಂದು ಅಪ್ಪಣೆಮಾಡಿ ಕಳುಹಿಸಿದಳು.

ವಿದರ್ಭದೇಶದಿಂದ ಹೊರಟ ಬ್ರಾಹ್ಮಣರು ನಾನಾದೇಶಗಳಲ್ಲಿ ಸಂಚಾರ ಮಾಡುತ್ತ ಕೊನೆಗೆ ಅಯೋಧ್ಯಾ ಪಟ್ಟಣದಲ್ಲಿ ಯಾಗ ನಡೆಯುತ್ತಿದೆಯೆಂಬ ಸುದ್ದಿ ಕೇಳಿ ಅಲ್ಲಿಗೆ ಬಂದರು. ಮರುದಿನ ಓಲಗದಲ್ಲಿದ್ದ ಋತುಪರ್ಣನನ್ನು

ಬ್ರಾಹ್ಮಣರು ಕಾಣಿಸಿಕೊಂಡರು. ಅವರಲ್ಲಿ ಒಬ್ಬ ಬ್ರಾಹ್ಮಣನು 'ಹಿರಿಯರೂ, ಸಾಮಾಜಿಕರೂ, ಸಚ್ಚರಿತ್ರರೂ ಆದ ತಾವು ನನ್ನ ಮಾತನ್ನು ಲಾಲಿಸಬೇಕು. ಕಾಡಿನಲ್ಲಿ ಬಳಲಿದ ಹೆಂಡತಿಯನ್ನು ಮಲಗಿಸಿ ಬಟ್ಟೆಯಲ್ಲಿ ಅರ್ಧವನ್ನು ತೆಗೆದುಕೊಂಡು ಹೋದವರು ಲೋಕದಲ್ಲಿ ಉಂಟೆ? ರಾಜರಿಗೆ ಈ ನಡತೆ ಯೋಗ್ಯವಾದುದೇ?' ಎಂದು ಗಂಭೀರಧ್ವನಿಯಿಂದ ಕೇಳಿದನು.

ಬ್ರಾಹ್ಮಣನ ಮಾತಿಗೆ ಬಾಹುಕನು ಹೇಳಿದನು 'ಸ್ವಾಮಿ, ತಾವು ಎಲ್ಲಿಂದ ಬಂದಿರಿ? ಹೆಂಡತಿಯನ್ನು ಅಗಲಿದ ಗಂಡನು ನೀಚನೇ ಸರಿ. ಇಂದು ಋತುಪರ್ಣನ ಸಭೆಯಲ್ಲಿ ಸೋಜಿಗದ ಮಾತನ್ನು ಕೇಳಿದಂತಾಯಿತು. ನೀವು ಹೇಳಿದ ಮಾತಿನಂತೆ ಅದು ಹೆಂಡತಿಗೆ ವಂಚನೆಯಲ್ಲ; ಗಂಡನಲ್ಲಿ ಒಂದು ಕೊರತೆ.' ಸಭೆಯಲ್ಲಿ ಮಿಕ್ಕವರೆಲ್ಲ ಸುಮ್ಮನಿರಲು 'ಈತನೇಕೆ ಮಾತನಾಡಿದ? ಇವನು ನಳನಾಗಿರಬಹುದೇ? ಆದರೆ ಇವನು ಕುರೂಪಿ. ಹೀಗೆ ಸಂಶಯ ಬಂದು ಬ್ರಾಹ್ಮಣನು ವಿದರ್ಭದೇಶಕ್ಕೆ ಹಿಂದಿರುಗಿ ಅಯೋಧ್ಯೆಯಲ್ಲಿ ನಡೆದ ವೃತ್ತಾಂತವನ್ನು ದಮಯಂತಿಗೆ ತಿಳಿಸಿದನು.

ಬ್ರಾಹ್ಮಣನ ಮಾತಿನಿಂದ ದಮಯಂತಿಗೆ ಸಂಶಯ ಬಂದು ನಳನನ್ನು ತನ್ನಲ್ಲಿಗೆ ಬರುವಂತೆ ಮಾಡಲು ಒಂದು ಉಪಾಯವನ್ನು ಹೂಡಿದಳು. ತಂದೆಯ ಅಪ್ಪಣೆಯನ್ನು ಪಡೆದು ಸುದೇವನನ್ನು ಕರೆದು ಅವನು ಮಾಡಬೇಕಾದ ಕಾರ್ಯವನ್ನು ವಿವರಿಸಿ ಅವನನ್ನು ಅಯೋಧ್ಯೆಗೆ ಕಳುಹಿಸಿಕೊಟ್ಟಳು. ಸುದೇವನು ಅಯೋಧ್ಯೆಗೆ ಬಂದು ಋತುಪರ್ಣನನ್ನು ಕಂಡು 'ರಾಜ, ವಿದರ್ಭನಗರಿಯಲ್ಲಿ ದಮಯಂತಿಗೆ ಮತ್ತೆ ಸ್ವಯಂವರ ಏರ್ಪಟ್ಟಿದೆ. ಅನೇಕ ಜನ ರಾಜರು ಅಲ್ಲಿಗೆ ಬರುತ್ತಿದ್ದಾರೆ. ಹೆಣ್ಣಿನ ಬಯಕೆ ನಿಮಗಿದ್ದರೆ ನೀವೂ ಅಲ್ಲಿಗೆ ಹೋಗಬಹುದು' ಎಂದನು. ಋತುಪರ್ಣನಿಗೆ ಹೋಗುವ ಆಸೆಯಾಯಿತು. ಕೂಡಲೇ ಬಾಹುಕನಿಗೆ ರಥವನ್ನು ಸಿದ್ಧಪಡಿಸುವಂತೆ ರಾಜನು ಅಪ್ಪಣೆ ಮಾಡಿದನು. ದಮಯಂತಿಗೆ ಎರಡನೆಯ ಮದುವೆಯೇ, ಇದು ಸಂದೇಹ ಎಂದು ಬಾಹುಕನು ರಥವನ್ನು ಸಿದ್ಧಪಡಿಸಿ ಪ್ರಯಾಣಕ್ಕೆ ಅನುವಾದನು.

ರಾಜನು ಪ್ರಯಾಣ ಹೊರಟನು. ಬಾಹುಕನು ವಾಯುವೇಗದಿಂದ ರಥವನ್ನು ನಡೆಸಿದನು. ದಾರಿಯಲ್ಲಿ ರಾಜನ ಉತ್ತರೀಯವು ಬಿದ್ದು ಹೋದರೂ ಅದನ್ನು ತರಲಾಗಲಿಲ್ಲ. ದಾರಿಯಲ್ಲಿ ಋತುಪರ್ಣನು ಒಂದು ಮುತ್ತುಗದ ಮರವನ್ನು ಕಂಡು ಅದರಲ್ಲಿ ಪದ್ಮ ಸಂಖ್ಯೆಯ ಎಲೆಗಳಿವೆ ಎಂದನು. ನಳನಿಗೆ ಸೋಜಿಗವಾಗಿ ರಥದಿಂದ ಇಳಿದು ಎಲೆಗಳನ್ನು ಎಣಿಸಲಾಗಿ ಲೆಕ್ಕ ಸರಿ

ಯಾಗಿತ್ತು. ಆಗ ಕಲಿಪುರುಷನು ನಳನಿಗೆ ಇದಿರಾಗಿ ರಾಜ, ನನ್ನಿಂದ ನಿನಗೆ ಈ ತೆರನಾದ ಕಷ್ಟ ಒದಗಿತು. ನಿನ್ನ ಸತ್ಯಪರೀಕ್ಷೆಗಾಗಿ ನಾನು ಇಷ್ಟೊಂದು ಕಷ್ಟ ಕೊಟ್ಟೆ. ಇದಕ್ಕಾಗಿ ಚಿಂತಿಸಬೇಡ. ಮುಂದೆ ನಿನಗೆ ಮಂಗಳ ಕಾದಿದೆ' ಎಂದು ಅವನನ್ನು ಹರಸಿ ಹೊರಟುಹೋದನು. ಕಲಿ ಪುರುಷನು ಹೊರಟುಹೋದ ಮೇಲೆ ನಳನು ರಾಜನಿಗೆ ಅಶ್ವಹೃದಯವನ್ನು ಹೇಳಿಕೊಟ್ಟು, ಆತನಿಂದ ಅಕ್ಷಹೃದಯುವನ್ನು ತಿಳಿದುಕೊಂಡನು. ಗೊತ್ತಾದ ಕಾಲದಲ್ಲಿ ಇಬ್ಬರೂ ವಿದರ್ಭನಗರವನ್ನು ಸೇರಿದರು.

ರಾಜಧಾನಿಯಲ್ಲಿ ಸ್ವಯಂವರದ ಸಂಭ್ರಮವಿರಲಿಲ್ಲ. ಬ್ರಾಹ್ಮಣನ ಮಾತನ್ನು ಕೇಳಿ ಬಂದುದು ತಪ್ಪಾಯಿತೆಂದುಕೊಂಡನು ಋತುಪರ್ಣ. ಭೀಮರಾಜನು ಅವನನ್ನು ಮನ್ನಿಸಿ ಮರುದಿನ ಅವನನ್ನು ಓಲಗದಲ್ಲಿ ಕಾಣಿಸಿ ಕೊಂಡನು. ಸಭೆಯಲ್ಲಿದ್ದ ಬಾಹುಕನನ್ನು ಕಂಡು ಅವನು ನಳನಿರಬಹುದೇ ಎಂದು ಅನುಮಾನವಾಯಿತು. ಮರುದಿನ ದಾದಿಯರು ಹೇಳಿದ ನಳನ ಗುಣಗಳನ್ನು ಕೇಳಿ ಅವನೇ ನಳನೆಂದು ನಿಶ್ಚೈಸಿ ಅವನನ್ನು ಪರೀಕ್ಷಿಸಲು ದಮಯಂತಿ ಮತ್ತೊಂದು ಉಪಾಯಮಾಡಿದಳು. ತನ್ನ ಮಕ್ಕಳನ್ನು ಸಿಂಗರಿಸಿ, ಅವರನ್ನು ನಳನಲ್ಲಿಗೆ ಕಳುಹಿದಳು. ನಳನು ಬಾಲಕರನ್ನು ಮುದ್ದಾಡಿ ಕಣ್ಣೀರು ಮಿಡಿದುದನ್ನು ಕಂಡು ಅವನೇ ನಳನೆಂದು ದಮ ಯಂತಿಗೆ ಖಚಿತವಾಯಿತು.

ಮಗಳ ಮಾತಿನಂತೆ ತಾಯಿ ಬಾಹುಕನನ್ನು ರಾಜಮಂದಿರಕ್ಕೆ ಕರೆಸಿ ಕೊಂಡಳು. ಮಾಸಿದ ಸೀರೆಯಲ್ಲಿ ಕಂದಿದ ಮುಖವುಳ್ಳ ದಮಯಂತಿಯನ್ನು ಕಂಡು ರಾಜನು ನಾಚಿಕೆಯಿಂದ ತಲೆತಗ್ಗಿಸಿದನು. ದಮಯಂತಿ ತನ್ನನ್ನು ಕಾಪಾಡಬೇಕೆಂದು ಗಂಡನ ಕಾಲಿಗೆ ಎರಗಿದಳು. ನಳನು ಆಕೆಯನ್ನು ಹಿಡಿ ದೆತ್ತಿ 'ಪ್ರಿಯೆ, ಚಿಂತಿಸಬೇಡ. ಲೋಕದ ಪತಿವ್ರತೆಯರಿಗೆ ನೀನು ಗುರು. ನನ್ನನ್ನು ಏಕೆ ಬಯಸುತ್ತಿ? ಈ ಎರಡನೆಯ ಸ್ವಯಂವರದಲ್ಲಿ ನಿನಗೆ ಬೇಕಾದವರನ್ನು ಒಲಿಸು' ಎಂದು ನೊಂದು ನುಡಿದನು. ಈ ಮಾತು ಕೇಳಿ ದಮಯಂತಿಗೆ ಎದೆಯಲ್ಲಿ ಕತ್ತಿ ಇರಿದಂತಾಯಿತು. ಅವಳು ಕಣ್ಣೀರು ಸುರಿ ಸುತ್ತ 'ಸ್ವಾಮಿ, ನನಗೇಕೆ ಮತ್ತೆ ಸ್ವಯಂವರ? ನಿಮ್ಮನ್ನು ಮತ್ತೆ ಪಡೆ ಯಲು ಹೂಡಿದ ಹೂಟ ಇದು. ನೀವು ವಿಕಾರರೂಪದಿಂದ ಅಯೋಧ್ಯೆ ಯಲ್ಲಿರುವುದಾಗಿ ಕೇಳಿದೆ. ಸ್ವಯಂವರದ ನೆವದಿಂದ ನಿಮ್ಮನ್ನು ಇಲ್ಲಿಗೆ ಕರೆಸಿದೆ. ಇದುವರೆಗೂ ನಿಮ್ಮನ್ನು ಹೊರತೂ ಮತ್ತೊಬ್ಬರನ್ನು ನಾನು ಬಯಸಿದವಳಲ್ಲ. ಇದಕ್ಕೆ ದಿಕ್ಪಾಲಕರೇ ಸಾಕ್ಷಿ. ನನ್ನನ್ನು ಕಾಪಾಡಿ

ಎಂದು ಹೇಳಿದಳು. ಅಷ್ಟರಲ್ಲೇ 'ದಮಯಂತಿ ಹೇಳಿದುದು ಸತ್ಯ. ಆಕೆ ಲೋಕಪಾವನೆ. ಸಂಶಯಪಡಬೇಡ' ಎಂದು ವಾಯುದೇವನು ಆಕಾಶದಲ್ಲಿ ನುಡಿದನು. ನಳನಿಗೆ ಸಂದೇಹ ತೊಲಗಿ ಸಂತೋಷವಾಯಿತು. ಪಕ್ಷಿಗಳನ್ನು ನೆನೆಯಲು ಬಟ್ಟೆ ಅವನಿಗೆ ಬಂತು. ಅದನ್ನು ಧರಿಸಲು ಮತ್ತೆ ಹಿಂದಿನ ರೂಪ ಬಂತು. ಈ ಸಂಭ್ರಮದಲ್ಲಿ ಎಲ್ಲರೂ ಜಿರೆತರು. ನಳದಮಯಂತಿಯರ ಕಷ್ಟ ತೊಲಗಿದವು. ಬಾಹುಕನು ನಳನೆಂದು ತಿಳಿದ ಕೂಡಲೆ ಋತುಪರ್ಣನು ಅವನ ಕ್ಷಮೆ ಬೇಡಿ, ಅಪ್ಪಣೆ ಪಡೆದು ರಾಜಧಾನಿಗೆ ಹಿಂದಿರುಗಿದನು.

ಒಂದು ವರ್ಷಕಾಲ ನಳನು ಮಾವನ ಮನೆಯಲ್ಲಿದ್ದು, ಬಳಿಕ ಯುದ್ಧ ದಲ್ಲಿಯೂ, ಜೂಜಿನಲ್ಲಿಯೂ ಪುಷ್ಕರನನ್ನು ಸೋಲಿಸಿ ಹೆಂಡತಿ ಮಕ್ಕ ಳೊಡನೆ ಸುಖವಾಗಿ ಧರ್ಮದಿಂದ ರಾಜ್ಯವಾಳುತ್ತಿದ್ದನು.

## ೩. ವಿಮರ್ಶೆ

ನಳಚರಿತ್ರೆಯನ್ನು ಕುರಿತು ವಿಮರ್ಶೆಯ ರೂಪವಾಗಿ ಹೇಳಬಹುದಾದ ಮಾತು ಬಹಳ ಸ್ವಲ್ಪವೆಂದೇ ತೋರುತ್ತದೆ. ಸಂಸ್ಕೃತ ಮಹಾಭಾರತದ ವನ ಪರ್ವದಲ್ಲಿ ಇಪ್ಪತ್ತೆಂಟು ಅಧ್ಯಾಯಗಳಲ್ಲಿ ವಿಸ್ತಾರವಾಗಿ ಹೇಳಿರುವ ನಳೋಪಾ ಖ್ಯಾನವೇ ಕನ್ನಡ ನಳಚರಿತ್ರೆಗೆ ಮೂಲ. ಕಾಮ್ಯಕ ವನದಲ್ಲಿ ತಮ್ಮಂದಿ ರೊಡನಿದ್ದ ಧರ್ಮರಾಯನು ಇಂದ್ರಲೋಕಕ್ಕೆ ಹೋಗಿದ್ದ ಅರ್ಜುನನನ್ನು ಕುರಿತು ಚಿಂತಿಸುತ್ತ, ತಮಗೆ ಒದಗಿದ ಕಷ್ಟಗಳನ್ನು ನೆನೆದು ದುಃಖಿಸುತ್ತ ಇರುವಾಗ, ಬೃಹದಶ್ವನೆಂಬ ಮುನಿ ನಳನ ಕಥೆಯನ್ನು ಧರ್ಮರಾಜನಿಗೆ ತಿಳಿಸಿ ಅವನನ್ನು ಸಮಾಧಾನ ಮಾಡುತ್ತಾನೆ. ಕನಕದಾಸನ ಈ ಕಾವ್ಯ, ಸಾಮಾನ್ಯವಾಗಿ ಮೂಲವನ್ನು ಹೆಜ್ಜೆಹೆಜ್ಜೆಗೂ ಅನುಸರಿಸುತ್ತದೆ. ಆದರೂ ಕವಿ ತನ್ನ ಕಾವ್ಯದಲ್ಲಿ ಮೂಲದಲ್ಲಿ ಬರುವ ಕೆಲವು ವಿಷಯಗಳನ್ನು ಕೈಬಿಟ್ಟಿ ದ್ದಾನೆ. ಕೆಲವನ್ನು ಸೇರಿಸಿದ್ದಾನೆ. ಕಥೆಯ ಸನ್ನಿವೇಶಗಳನ್ನು ಸಣ್ಣ ವ್ಯತ್ಯಾಸ ಗಳೊಡನೆ ಮಾರ್ಪಡಿಸಿದ್ದಾನೆ. ಈ ವ್ಯತ್ಯಾಸಗಳಿಂದ ಕಥೆಗಾಗಲೀ, ಪಾತ್ರ ಪೋಷಣೆಗಾಗಲೀ ವಿಶೇಷ ಪ್ರಯೋಜನವಾಗದಿದ್ದರೂ, ಈ ಮಾರ್ಪಾಡು ಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ತಿಳಿಸಿದೆ.

ಭೀಮನೃಪಾಲನಿಗೆ ಗಂಡುಮಕ್ಕಳಾದ ವಿಷಯವನ್ನು ಕವಿ ಕೈಬಿಟ್ಟಿ ದ್ದಾನೆ. ಹಾಗೆಯೇ ದಮಯಂತಿಯ ಸ್ವಯಂವರ ಕಾಲದಲ್ಲಿ ದಿಕ್ಪಾಲಕರು ನಳನಿಗೆ ಕೊಟ್ಟ ವರಗಳ ವಿಷಯವನ್ನೇ ಕವಿ ಎತ್ತಿಲ್ಲ. ದಮಯಂತಿಗೆ ನಳನ

ಸಂದೇಶವನ್ನು ಕೊಂಡೊಯ್ಯುವ ಹಂಸವನ್ನು ಕಾಣುವ ಮುನ್ನ ನಳನು ಬೇಟೆಗೆ ಹೋಗುವುದು, ಇಂದ್ರನ ಸಂದೇಶವನ್ನು ದಮಯಂತಿಗೆ ನಳನು ತೆಗೆದುಕೊಂಡು ಹೋಗುವುದಕ್ಕೆ ಮುಂಚೆ ದೇವತಾಸ್ತ್ರೀಯರು ದಮಯಂತಿಗೆ ಇಂದ್ರನಲ್ಲಿ ಪ್ರೇಮವನ್ನುಂಟುಮಾಡಲು ಬರುವುದು. (ನಳನಲ್ಲಿ ದಮಯಂತಿಯ ಪ್ರೀತಿ ಅಚಲವಾದುದು ಎಂಬುದನ್ನು ತಿಳಿಸಲು ಈ ಸನ್ನಿವೇಶವನ್ನು ಕವಿ ಕಲ್ಪಿಸಿರಬಹುದು). ದಮಯಂತಿಯನ್ನು ತಿರುಗಿ ಕೊಡಿದ ಮೇಲೆ ನಳನು ಪುಷ್ಕರನೊಡನೆ ಯುದ್ಧಮಾಡುವುದು—ಇವು ಮೂಲದಲ್ಲಿಲ್ಲದ ಸನ್ನಿವೇಶಗಳು. ದಮನ ವರದಿಂದಲೇ ರಾಜನಿಗೆ ಮಕ್ಕಳಾದುದು, ನಳನು ತನ್ನ ಪಟ್ಟಣದ ಬಳಿಯ ಉಪವನದಲ್ಲೇ ಸುವರ್ಣಮಯವಾದ ಹಂಸನನ್ನು ನೋಡಿದುದು, ನಾರದನ ಮಾತನ್ನು ಕೇಳಿ ಇಂದ್ರನು ದಮಯಂತಿಯ ಸ್ವಯಂವರಕ್ಕೆ ಹೊರಟಿದ್ದ ನಳನನ್ನು ದಾರಿಯಲ್ಲೇ ಸಂಧಿಸಿದುದು, ಇಂದ್ರನ ವರಬಲದಿಂದಲೇ ನಳನು ದಮಯಂತಿಯ ಅಂತಃಪುರವನ್ನು ನಿಜರೂಪದಿಂದ ಸೇರಿದುದು, ನಳನನ್ನು ಕರುಣಿಸಬೇಕೆಂದು ದಮಯಂತಿ ಇಂದ್ರಾದಿಗಳನ್ನು ಬೇಡಿದುದು, ಸ್ವಯಂವರಕ್ಕೆ ಹೊರಟಿದ್ದ ಕಲಿ ದ್ವಾಪರನೊಡನೆ ಸಂಧಿಸುವುದು. ಮೂತ್ರ ವಿಸರ್ಜನೆ ಮಾಡಿದ ನಳನು ಆಚಮನ ಮಾಡದೆ, ಸಂಧ್ಯಾದಿ ಕಾರ್ಯಗಳಲ್ಲಿ ತೊಡಗುವುದು, ಹಾವಿನ ಬಾಯಿಂದ ಬಿಡಿಸಿದ ಬೇಡನು ದಮಯಂತಿಯನ್ನು ಕಾಮಿಸಲು, ಆಕೆ ಅವನನ್ನು ಸುಟ್ಟುಬಿಡುವುದು— ಇವೇ ಮೊದಲಾದ ಮೂಲದ ಸನ್ನಿವೇಶಗಳು ಸ್ವಲ್ಪ ವ್ಯತ್ಯಾಸದೊಡನೆ ಈ ಕಾವ್ಯದಲ್ಲಿ ವರ್ಣಿತವಾಗಿವೆ.

ಕಾವ್ಯವನ್ನು ಓದಿದಾಗ ಈ ವ್ಯತ್ಯಾಸಗಳು ಚೆನ್ನಾಗಿ ಗೊತ್ತಾಗುತ್ತವೆ. ಈ ವ್ಯತ್ಯಾಸಗಳಿಂದ ಅನೇಕ ವೇಳೆ ಕಥೆಗೆ ಒಳ್ಳೆಯ ಪರಿಣಾಮ ಆಗಿರುವುದೂ ಉಂಟು. ಅಂಥ ಮೂರು ಸನ್ನಿವೇಶಗಳನ್ನು ಇಲ್ಲಿ ತಿಳಿಸಬಹುದು. ಮೂತ್ರ ವಿಸರ್ಜನೆಗೆ ಬದಲಾಗಿ ಶುದ್ಧಾಚಮನ ಮಾಡದೆ, ನಳನು ನೀರು ಕುಡಿದನು ಎಂದು ಇಲ್ಲಿ ಹೇಳಿರುವುದು ಉಚಿತವೂ ಹಿತಕರವೂ ಆಗಿದೆ. ಹೆಬ್ಬಾವಿನ ಬಾಯಿಂದ ತನ್ನನ್ನು ಬಿಡಿಸಿದ ಬೇಡನ ವಿಷಯದಲ್ಲಿ ದಮಯಂತಿಗೆ ಕೃತಜ್ಞತಾಭಾವವಿದೆ. ಅವನು ಅವಳನ್ನು ಕಾಮಿಸಲು, ಶಾಪ ಕೊಡುತ್ತೇನೆ ಎಂದು ಹೆದರಿಸಿದಳು. ಪ್ರಾಣ ಉಳಿಸಿದ ನೀನು ತಂದೆ ಎಂದು ಹೇಳಿದಳು. ದಮಯಂತಿಯ ಮಾತಿಗೆ ಬೇಡನು ಹೆದರಿ, ಆಕೆಗೆ ವಂದಿಸಿ ಹೋಗುತ್ತಾನೆ. ದೊಡ್ಡವರು ಶಾಪ ಕೊಟ್ಟು ತಮ್ಮ ಶಕ್ತಿಯನ್ನು ಹಾಳುಮಾಡಿಕೊಳ್ಳುವುದಿಲ್ಲ. ದಮಯಂತಿ ಈ ಗುಂಪಿಗೆ ಸೇರಿದವಳು. ಬೇಡನನ್ನು ಸುಡುವಷ್ಟು

ದೂರ ಆಕೆ ಹೋಗಬೇಕಾಗಲಿಲ್ಲ. ಅವಳ ಒಳ್ಳೆಯ ಮಾತು, ಹೆದರಿಸಿದ ರೀತಿ, ಬೇಡನನ್ನು ಒಳ್ಳೆಯ ದಾರಿಗೆ ತರಲು ಸಾಕಾಯಿತು. ಇಲ್ಲಿ ಬೇಡನೂ ಬದುಕಿಕೊಳ್ಳುವುದಲ್ಲದೆ, ದಮಯಂತಿಯ ಉಪಕಾರಸ್ಮರಣೆ, ಅವಳ ತಾಳ್ಮೆ ಈ ಗುಣಗಳು ವ್ಯಕ್ತವಾಗುತ್ತವೆ. ಹಾವಿನ ಬಾಯಿಂದ ಬಿಡಿಸಿದ ಮೇಲೆ ಬೇಡನು ಅವಳ ಮೈಯನ್ನು ತೊಳೆದನೆಂದು ಮೂಲದಲ್ಲಿ ಹೇಳಿರುವುದು ಚೆನ್ನಾಗಿಲ್ಲ. ಪತಿವ್ರತೆಯ ಮೈಯನ್ನು ಪರಪುರುಷನು ತೊಳೆಯುವುದೆಂದರೇನು ? ಅದಕ್ಕೆ ಬದಲಾಗಿ ದಮಯಂತಿಯೇ ಕೊಳಕ್ಕೆ ಹೋಗಿ ಮಿಂದಳೆಂದು ನಮ್ಮ ಕವಿ ಹೇಳಿರುವುದು ವಿಹಿತವಾಗಿಲ್ಲವೇ ? ಈ ಸಂದರ್ಭಗಳಲ್ಲೆಲ್ಲ ಕವಿ ತನ್ನ ವಿವೇಚನಾಶಕ್ತಿಯನ್ನು ಚೆನ್ನಾಗಿ ಉಪಯೋಗಿಸಿದ್ದಾನೆ.

ನಳಚರಿತ್ರೆ ಒಂದು ಸೊಗಸಾದ ಕಥನಕಾವ್ಯ. ಕಥೆಯ ಒಳಗಡೆ ಯಾವ ಉಪಕಥೆಗಳೂ ಬರುವುದಿಲ್ಲ. ಕವಿ ಕಥೆಯನ್ನು ರಸ ಉಕ್ಕುವಂತೆ ನಿರೂಪಿಸಿದ್ದಾನೆ. ವಿಷಯುಗಳನ್ನು ಅತಿಯಾಗಿ ಹಿಗ್ಗಿಲಿಸಿಯೂ ಇಲ್ಲ. ಸಂಗ್ರಹಿಸಿಯೂ ಇಲ್ಲ. ಸಮಪ್ರದೇಶದಲ್ಲಿ ಹರಿಯುವ ನದಿಯಂತೆ ಕಥೆ ಗಂಭೀರವಾಗಿ ಸಾಗುತ್ತದೆ. ಕಥೆಯ ನಡುವೆ ಬರುವ ವರ್ಣನೆಗಳು ಹಿತವಾಗಿಯೂ, ಮಿತವಾಗಿಯೂ ಇದ್ದು ಗ್ರಾಹ್ಯವಾಗಿವೆ. ಪಟ್ಟಣವನ್ನು ವರ್ಣಿಸಲಿ, ದಮಯಂತಿಯ ರೂಪವನ್ನು ವರ್ಣಿಸಲಿ, ಇಲ್ಲವೆ ಕಾಡುಕಿಚ್ಚನ್ನು ವರ್ಣಿಸಲಿ ಕವಿ ಅದನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾನೆ. ಶೃಂಗಾರದ ವಿಷಯದಲ್ಲಂತೂ ಕವಿಯದು ಅತಿಯಾದ ಸಂಯಮ. ಈ ವಿಷಯದಲ್ಲಿ ಹಿಂದಿನ ಕವಿಗಳು ಕನಕದಾಸನಿಂದ ಪಾಠ ಕಲಿತಿದ್ದರೆ ಎಷ್ಟೋ ಮೇಲಾಗುತ್ತಿತ್ತು. ವರ್ಣಿಸಲು ಹೊರಟ ವಿಷಯವನ್ನು ಸ್ಪಷ್ಟಪಡಿಸಲು ಕವಿ ಉಪಯೋಗಿಸಿರುವ ಅಲಂಕಾರಗಳು ಬಹು ಸ್ವಲ್ಪ. ಉಪಮೆ, ರೂಪಕ ಸ್ವಭಾವೋಕ್ತಿ, ಅನುಪ್ರಾಸ ಈ ಅಲಂಕಾರಗಳಿಗೆ ಮಾತ್ರ ಇಲ್ಲಿ ಸ್ಥಳ ದೊರೆತಿದೆ. ಕೊನೆಗೆ ಉತ್ಪ್ರೇಕ್ಷೆ, ಅತಿಶಯೋಕ್ತಿಗಳಿಗೂ ಇಲ್ಲಿ ಹೆಚ್ಚು ಸ್ಥಳವಿಲ್ಲ. ಈ ವಿಷಯದಲ್ಲಿ ಕನಕದಾಸನನ್ನು ಬಾಯಿತುಂಬ ಹೊಗಳಲೇಬೇಕು.

ಈ ಕಾವ್ಯದಲ್ಲಿ ಬರುವ ಪಾತ್ರಗಳಲ್ಲಿ ಮುಖ್ಯರಾದವರು ನಳ, ದಮಯಂತಿ. ಈ ಪಾತ್ರಗಳಲ್ಲಿ ಕಂಡುಬರುವ ಮುಖ್ಯವಾದ ಗುಣಗಳನ್ನು ಕವಿ ಚೆನ್ನಾಗಿ ಗ್ರಹಿಸಿ ವಿವರಿಸಿದ್ದಾನೆ. ನಳನ ರೂಪು, ಗಾಂಭೀರ್ಯ, ವಿನಯ, ಸಹನೆ, ದ್ಯೂತದಲ್ಲಿ ಅವನಿಗಿದ್ದ ವ್ಯಸನ ಇವೇ ಮೊದಲಾದ ಗುಣಗಳನ್ನು ವರ್ಣಿಸಿ ಅವನ ಕಷ್ಟದ ವಿಷಯದಲ್ಲಿ ನಮ್ಮ ಸಹಾನುಭೂತಿ, ಅನುಕಂಪೆಯನ್ನು ಅವನ ಕಡೆ ಹರಿಯಿಸುತ್ತಾನೆ. ದಮಯಂತಿಯ ವಿಷಯವನ್ನು

ಓದಿದಾಗಲೂ ಆಕೆ 'ಮಹಾಸತಿ' ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ.

ಕೊನೆಯದಾಗಿ ನಳಚರಿತ್ರೆಯ ಶೈಲಿಯನ್ನು ಕುರಿತು ಒಂದು ಮಾತನ್ನು ಹೇಳಬೇಕೆನಿಸುತ್ತದೆ. ಕನ್ನಡ ಮಾತುಗಳನ್ನೇ ಹೆಚ್ಚಾಗಿ ಉಪಯೋಗಿಸಿ ವಿಷಯವನ್ನು ಸ್ಪಷ್ಟವಾಗಿ ನಿರೂಪಿಸಬಲ್ಲ ಶಕ್ತಿ ಕನಕದಾಸನಿಗುಂಟು. ಪರಿಚಯವಿಲ್ಲದ ಸಂಸ್ಕೃತಪದವನ್ನಾಗಲೀ, ಪೆಡಸಾದ ಸಮಾಸಗಳನ್ನಾಗಲೀ ಅವನು ಉಪಯೋಗಿಸುವುದೇ ಇಲ್ಲ. ಪ್ರಾಸಕ್ಕಾಗಲೀ, ಪಾದಪೂರ್ಣಕ್ಕಾಗಲೀ ಅವನು ಎಲ್ಲಿಯೂ ಕಷ್ಟಪಟ್ಟಂತೆ ತೋರುವುದಿಲ್ಲ. ಕುಮಾರವ್ಯಾಸ, ಕುಮಾರವಾಲ್ಮೀಕಿಗಳ ಕವಿತೆಗಳಿಗಿಂತ ಇವನ ಕವಿತೆ ಮಧುರ. ಮಾತುಗಳು ಇಂಪು. ಕುಮಾರವ್ಯಾಸನ ಪ್ರತಿಭೆ, ಅವನ ಸಮಗ್ರದೃಷ್ಟಿ ಇಲ್ಲಿಲ್ಲ; ನಿಜ. ಅವನ ಒರಟುತನವೂ ಇಲ್ಲಿಲ್ಲ. ತಿಳಿಯಾದ ಇಂಪಾದ ಭಾಷೆಯಲ್ಲಿ ಕವಿ ಕಾವ್ಯ ಬರೆದುದರಿಂದಲೇ ಅದು ಕನ್ನಡ ಲೋಕಪ್ರಿಯವಾದದ್ದು. ಈ ವಿಷಯದಲ್ಲಿ ಮಾತ್ರ ಅವನ ಕಾವ್ಯ 'ಕಾವ್ಯಕ್ಕೆ ಗುರು.'

ಈ ವಿಮರ್ಶೆಯನ್ನು ಮುಗಿಸುವ ಮುಂಚೆ ಕುಮಾರವ್ಯಾಸನು ಕನಕದಾಸನ ಮೇಲೆ ಎಷ್ಟು ಪ್ರಭಾವ ಬೀರಿರುವನೆಂಬ ಅಂಶವನ್ನು ಪರಿಶೀಲಿಸಬಹುದು. ಕನ್ನಡ ರಾಮಾಯಣ ಭಾರತಗಳಿಗೆ ತಾನು ಋಣಿಯೆಂಬುದನ್ನು ಕವಿಯೇ ಒಪ್ಪಿಕೊಂಡಿದ್ದಾನೆ. ನಳಚರಿತ್ರೆಯನ್ನು ಓದುತ್ತಿದ್ದರೆ ಭಾರತದ ಮಾತುಗಳೂ, ವರ್ಣನೆಗಳೂ, ಸನ್ನಿವೇಶಗಳೂ ಮೇಲಿಂದ ಮೇಲೆ ನೆನಪಿಗೆ ಬರುತ್ತವೆ. ಒಂದೆರಡು ಉದಾಹರಣೆಗಳಿಂದ ಈ ಅಂಶವನ್ನು ವಿಶದಪಡಿಸಬಹುದು. 'ದಿನಪನಿದಿರಲಿ ತಮದ ಗಾವಳಿಯೇ' 'ತೀರಿತಿನ್ನೇನ್' 'ಹಳುವವೇ ಸಾಮ್ರಾಜ್ಯ' 'ಕಮಲವನದಲಿ ಮಂಜು ಸುರಿವಾಕ್ರಮದ ಬಗೆಯಲಿ' 'ಅಪಜಯದ ನಾರಿಯ ಸೆರಗ ಹಿಡಿದನು' 'ನೆಳಲು ತನುವಿನ ಬಳಿಯೊಳಲ್ಲದೆ ಚಲಿಸುವುದೆ' 'ಸಿತಾಬ್ಜಕೆ ಲಕ್ಷ್ಮಿಯಂದದಲಿ'—ಇವು ನಿಸ್ಸಂದೇಹವಾಗಿ ಕುಮಾರವ್ಯಾಸನ ಮಾತುಗಳು. ದಮಯಂತಿಯ ಸ್ವಯಂವರದ ವರ್ಣನೆ, ದ್ರೌಪದೀ ಸ್ವಯಂವರ ಮತ್ತು ಅಭಿಮನ್ಯುವಿನ ವಿವಾಹವನ್ನೂ, ನಳನ ದ್ಯೂತ ಪಾಂಡವರ ದ್ಯೂತವನ್ನೂ, ನಳನು ಅಜ್ಞಾತವಾಸ ಮುಗಿದಮೇಲೆ ಶೋಭಿಸಿದುದು ಪಾಂಡವರು ಅಜ್ಞಾತವಾಸ ಮುಗಿದಮೇಲೆ ತೊಳಗಿ ಬೆಳಗಿದುದನ್ನೂ ನೆನಪಿಗೆ ತರುತ್ತವೆ. ಇದಕ್ಕಾಗಿ ಕವಿಯಮೇಲೆ ದೋಷಾರೋಪಣೆ ಮಾಡಬೇಕಾಗಿಲ್ಲ. ಕನಕದಾಸ ಕನ್ನಡ ಭಾರತವನ್ನು ಚೆನ್ನಾಗಿ ಮನನ ಮಾಡಿದ್ದ. ಅದರ ಮಾದರಿಯ ಮೇಲೆ ತನ್ನ ಕಾವ್ಯರಚನೆಯನ್ನು

ಉತ್ತಮವಾದ ರೀತಿಯಲ್ಲಿ ಮಾಡಿದ ಎಂದು ಅರಿತರೆ ಸಾಕು; ಅಲ್ಲಿಗೆ ಕವಿಯ ಋಣ ಕುಮಾರವ್ಯಾಸನಿಗೆ ಮುಗಿಯುತ್ತದೆ.

ನಳಚರಿತ್ರೆ ಕನ್ನಡಿಗರಿಗೆ ಪ್ರಿಯವಾದ, ಒಂದು ಉತ್ತಮವಾದ ಕಾವ್ಯ. ಇದಕ್ಕೆ ಕಾರಣ ಎರಡು. ನಳದಮಯಂತಿಯರ ಕಥೆ ಲೋಕಪ್ರಸಿದ್ಧವಾದುದು. ಇಂಥ ಲೋಕಪ್ರಸಿದ್ಧವಾದ ಕಥೆಯನ್ನು ಕನಕದಾಸನು ಸುಲಿದ ಬಾಳೆಯ ಹಣ್ಣಿನಂತಿರುವ ಕನ್ನಡದಲ್ಲಿ ರಸ ಒಸರುವಂತೆ, ವರ್ಣನೆ ಕಣ್ಣಿಗೆ ಕಟ್ಟುವಂತೆ, ಸಂಭಾಷಣೆ ಮೇರೆ ಮೀರದಂತೆ, ನಳದಮಯಂತಿಯರು ತಮ್ಮ ಉತ್ತಮ ಗುಣಗಳಿಂದ ನಮಗೆ ಪ್ರಿಯರಾಗುವಂತೆ ಬಣ್ಣಿಸಿದ್ದಾನೆ. ಪಂಡಿತವರ್ಗ ಕನಕದಾಸನ ಕಾವ್ಯಕ್ಕೆ ಮನ್ನಣೆ ಕೊಟ್ಟಿತೋ ಇಲ್ಲವೋ ನಾನರಿಯೆ. ಆದರೆ ಕನ್ನಡ ಜನ ಈ ಕಾವ್ಯವನ್ನು ಶತಮಾನಗಳಿಂದ ಎದೆಗಪ್ಪಿಕೊಂಡು ಆನಂದಿಸಿದ್ದಾರೆ. ಇದಕ್ಕಿಂತ ಮಿಗಿಲಾದ ಕೀರ್ತಿ ಕವಿಗೇನು ಬೇಕು?

## ೪. ಗ್ರಂಥಪಾಠ

ಐದು ಪ್ರತಿಗಳ ಸಹಾಯದಿಂದ ಈ ಕಾವ್ಯದ ಪಾಠವನ್ನು ಗೊತ್ತುಮಾಡಿದೆ. ಇವುಗಳಲ್ಲಿ ಎರಡು ಓಲೆಯ ಪ್ರತಿಗಳು. ಉಳಿದ ಮೂರು ಮುದ್ರಿತ ಪ್ರತಿಗಳು. ಓಲೆಯ ಪ್ರತಿಗಳಲ್ಲಿ ಒಂದು ಅರಮನೆಯ ಸರಸ್ವತಿಯ ಭಂಡಾರಕ್ಕೆ ಸೇರಿದ್ದು. ಇದರ ನಂ. (ಕನ್ನಡ ಭಾಗ) ೧೨೧. ಇದರಲ್ಲಿ ೫೧ ಓಲೆಗಳಿವೆ. ೫೨ನೆಯ ಓಲೆಯ ಒಂದು ಪಕ್ಷದಲ್ಲಿ ಮಾತ್ರ ಸ್ವಲ್ಪ ಬರೆದಿದೆ. ಗ್ರಂಥ ಸಮಗ್ರ. ಅಕ್ಷರಗಳು ಸ್ಫುಟವಾಗಿದ್ದರೂ ಓಲೆಗಳನ್ನು ಅಲ್ಲಲ್ಲೇ ಹುಳು ಹೊಡೆದಿರುವ ಕಾರಣ, ಅನೇಕ ಕಡೆ ಓದಲು ಕಷ್ಟವಾಗುತ್ತದೆ. ಇದರಲ್ಲಿ ಗ್ರಂಥವನ್ನು ಪ್ರತಿಮಾಡಿದವನ ಹೆಸರನ್ನು ಹೇಳಿಲ್ಲ. 'ವಿಕ್ರಮನಾಮ ಸಂವತ್ಸರದ ಭಾದ್ರಪದದಲ್ಲಿ ನಳಚರಿತ್ರೆಯನ್ನು ಬರೆಯುವುದಕ್ಕೆ ಶುಭಮಸ್ತು' ಎಂದು ಹೇಳಿದ್ದರೂ, ಶಕವರ್ಷವನ್ನು ಹೇಳದಿರುವ ಕಾರಣ, ಗ್ರಂಥವನ್ನು ಪ್ರತಿಮಾಡಿದ ಕಾಲವನ್ನು ಖಚಿತವಾಗಿ ತಿಳಿದುಕೊಳ್ಳುವಂತಿಲ್ಲ. ಸಾಮಾನ್ಯವಾಗಿ ಶುದ್ಧವಾಗಿರುವ, ನೂರು ವರುಷಗಳಿಗೆ ಮೇಲ್ಪಟ್ಟ ಪುರಾತನವಾದ ಪ್ರತಿ ಇದು ಎಂದಿಟ್ಟುಕೊಳ್ಳಬಹುದು. ಎರಡನೆಯದು ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನಲ್ಲಿರುವ K. ೫೫೨ನೆಯ ನಂಬರಿನ ಪ್ರತಿ. ಇದರಲ್ಲಿ ಅಕ್ಷರಗಳು ಸ್ಫುಟವಾಗಿವೆ. ಗ್ರಂಥಪಾಠ ಸಾಮಾನ್ಯವಾಗಿ ಶುದ್ಧವಾಗಿದೆ. ಗ್ರಂಥಸಮಗ್ರ. 'ಸ್ವಭಾನು ಸಂವತ್ಸರದ ಚೈತ್ರ ಶುದ್ಧ ೩

ಗುರುವಾರ ಗುರುವಳ್ಳಿ ಐಗಳು ಸೂರಾಲು ವೆಂಕಟಕೃಷ್ಣಶೆಟ್ಟಿಯು ಬರೆದು ಸಂಪೂರ್ಣವಾದ ಪುಸ್ತಕಕ್ಕೆ ಶುಭಮಸ್ತು' ಎಂದು ಹೇಳಿದ್ದರೂ, ಇಲ್ಲಿಯೂ ಶಕವರ್ಷವನ್ನು ಹೇಳದ ಕಾರಣ ಗ್ರಂಥವನ್ನು ಪ್ರತಿಮಾಡಿದ ಕಾಲವನ್ನು ಸರಿಯಾಗಿ ಹೇಳುವಂತಿಲ್ಲ. ಈ ಎರಡು ಓಲೆಯ ಪ್ರತಿಗಳಿಂದ ನನ್ನ ಕೆಲಸಕ್ಕೆ ತುಂಬ ಅನುಕೂಲವಾಯಿತು. ಮುದ್ರಿತ ಪ್ರತಿಗಳಲ್ಲಿ ಒಂದು ೧೮೮೮ರಲ್ಲಿ ಬೆಂಗಳೂರಿನಲ್ಲಿ ಅಚ್ಚಾದದ್ದು. ಇದರಲ್ಲಿ ಸಂಪಾದಕರ ಹೆಸರನ್ನು ಹೇಳಿಲ್ಲ. ಬಹು ಪ್ರತಿಗಳ ಸಹಾಯದಿಂದ ಪಂಡಿತರು ಈ ಕಾವ್ಯವನ್ನು ಶೋಧಿಸಿರುವರೆಂದು ಮಾತ್ರ ಮುಖಪತ್ರದಲ್ಲಿ ಹೇಳಿದೆ. ಇದರಲ್ಲಿ ಅಚ್ಚಿನ ದೋಷಗಳಲ್ಲದೆ ಇನ್ನೂ ಅನೇಕ ತಪ್ಪುಗಳಿವೆ. ೧೯೦೭ರಲ್ಲಿ ಎಸ್. ಜಿ. ನರಸಿಂಹಾಚಾರ್ ಮತ್ತು ಎಂ. ಎಂ. ರಾಮಾನುಜ ಅಯ್ಯಂಗಾರ್ ಇವರಿಂದ ಸಂಶೋಧಿತವಾದ ಅಚ್ಚಿನ ಪ್ರತಿ ಇನ್ನೊಂದು. ಈ ಸಂಸ್ಕರಣದಲ್ಲಿ ವ್ಯಾಕರಣ ಮತ್ತು ಛಂದಸ್ಸಿಗೆ ಸಂಬಂಧಿಸಿದ ದೋಷಗಳಿವೆಯೆಂದರಿತು ಪಿ. ಆರ್. ಕರಿಬಸವಶಾಸ್ತ್ರಿಗಳು ಎಂಟು ಹಳೆಯ ಓಲೆಯ ಪ್ರತಿಗಳ ಸಹಾಯದಿಂದ ಈ ಕಾವ್ಯವನ್ನು ತಿದ್ದಿ ೧೯೩೫ರಲ್ಲಿ ಅಚ್ಚು ಮಾಡಿಸಿದರು. ಇದರಲ್ಲಿ ಗ್ರಂಥಪರಿಷ್ಕರಣ ಕ್ರಮವನ್ನು ತಿಳಿಸಿಲ್ಲ. ಅಲ್ಲದೆ ಗ್ರಂಥಪರಿಷ್ಕರಣಕಾರ್ಯದಲ್ಲಿ ಶಾಸ್ತ್ರಿಗಳು ತಮ್ಮ ಕೈವಾಡವನ್ನು ತೋರಿಸಿರುವುದು ಸ್ಪಷ್ಟವಾಗಿ ಕಾಣುತ್ತದೆ. ಕಾವ್ಯದ ಈ ಸಂಸ್ಕರಣದ ಮೇಲೆ ಹೆಚ್ಚು ವಿಶ್ವಾಸವನ್ನಿಡುವಂತಿಲ್ಲ.

ಗ್ರಂಥಪಾಠವನ್ನು ಗೊತ್ತುಮಾಡುವಾಗ ಯಾವ ಒಂದು ಗೊತ್ತಾದ ಕ್ರಮವನ್ನು ಅನುಸರಿಸಲು ನನಗೆ ಸಾಧ್ಯವಾಗಲಿಲ್ಲ. ಓಲೆಯ ಪ್ರತಿಗಳ ಪಾಠವನ್ನು ಮುದ್ರಿತ ಪ್ರತಿಗಳ ಪಾಠದೊಡನೆ ಹೊಂದಿಸಿಕೊಂಡು ಸಾಧ್ಯವಾದಷ್ಟು ಸರಸವೂ, ಉತ್ತಮವೂ ಆದ ಪಾಠವನ್ನು ಕೊಡಲು ಯತ್ನಿಸಿದೆ. ಆಧಾರವಿಲ್ಲದೆ ಎಲ್ಲಿಯೂ ತಿದ್ದಿಲ್ಲ. ಇದರಲ್ಲಿ ದೋಷಗಳುಂಟೆಂದು ಇತರರಿಗಿಂತಲೂ ನಾನು ಚೆನ್ನಾಗಿ ಬಲ್ಲೆ. ಇನ್ನೊಮ್ಮೆ ಈ ಕಾವ್ಯಕ್ಕೆ ಮುದ್ರಣದ ಸುಯೋಗ ದೊರೆತು, ಕಾವ್ಯದ ಹೆಚ್ಚಿನ ಓಲೆಯ ಪ್ರತಿಗಳು ದೊರೆತರೆ ಆಗ ಗ್ರಂಥವನ್ನು ಇನ್ನೂ ಚೆನ್ನಾಗಿ ಪರಿಷ್ಕರಿಸಬಹುದು. ಇದರಲ್ಲಿ ಕಂಡುಬರುವ ಕುಂದುಕೊರತೆಗಳನ್ನು ಬಲ್ಲವರು ಮನ್ನಿಸಬೇಕಾಗಿ ಬೇಡಿಕೆ.

ಜನಸಾಮಾನ್ಯಕ್ಕಾಗಿ ಅಚ್ಚು ಮಾಡಿಸಿರುವ ಈ ಮುದ್ರಣದಲ್ಲಿ ಶಕಟರೇಫವನ್ನು ಉಪಯೋಗಿಸಿಲ್ಲ.

ಈ ಕಾವ್ಯವನ್ನು ಈ ರೂಪಕ್ಕೆ ತರಲು ನನಗೊದಗಿರುವ ನೆರವನ್ನು ಸಂತೋಷದಿಂದ ಒಪ್ಪಿಕೊಳ್ಳುತ್ತೇನೆ. ಪೀಠಿಕೆಯಲ್ಲಿ ಬಂದಿರುವ ಕವಿಚರಿತ್ರೆ

ಯನ್ನು ಕರ್ಣಾಟಕ ಕವಿಚರಿತ್ರೆಯಿಂದಲೂ, ಮತ್ತು ಇತರ ಗ್ರಂಥಗಳಿಂದಲೂ ಸಂಗ್ರಹಿಸಿದೆ. ಓಲೆಯ ಪ್ರತಿಗಳನ್ನು ಉಪಯೋಗಿಸಿಕೊಳ್ಳಲು ಅನುಮತಿಯಿತ್ತ ಸಂಸ್ಥೆಗಳ ಮುಖ್ಯಾಧಿಕಾರಿಗಳಿಗೆ ನಾನು ಋಣಿ. ಕೊನೆಯದಾಗಿ, ಈ ಕಾವ್ಯವನ್ನು ಅಚ್ಚುಮಾಡಿಸುವ ಹೊಣೆಯನ್ನು ಹೊತ್ತಿರುವವರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯವರು. ಈ ಸಂಸ್ಥೆಗೂ ಮತ್ತು ನನ್ನನ್ನು ಈ ಕೆಲಸಕ್ಕೆ ಬೆನ್ನು ತಟ್ಟಿ ಪ್ರೋತ್ಸಾಹಿಸಿದ ಶ್ರೀಯುತರಾದ ಎಸ್. ವಿ. ಶ್ರೀನಿವಾಸರಾವ್, ಬಿ.ಎ., ಬಿ.ಟಿ., ಮತ್ತು ನ. ಭದ್ರಯ್ಯನವರಿಗೂ ನನ್ನ ಅನಂತ ವಂದನೆಗಳು. ಈ ಗ್ರಂಥದ ಮುದ್ರಣದ ಕಾಲದಲ್ಲಿ ಶ್ರೀ ಪಂಚಾಚಾರ್ಯ ಅಚ್ಚುಕೂಟದ ಅಧಿಕಾರಿಗಳು ತೋರಿಸಿದ ಸೌಜನ್ಯ ಸ್ಮರಣೀಯವಾಗಿದೆ.

ಶಾರದಾವಿಲಾಸ ಕಾಲೇಜು
ಮೈಸೂರು : ೬-೮-೧೯೪೭

**ಎಚ್. ಎಂ. ಶಂಕರನಾರಾಯಣರಾವ್**

# ಪರಿಚಯ

ಹಿಂದೆ ಪಾಂಡವರಲ್ಲಿ ಹಿರಿಯನಾದ ಧರ್ಮರಾಜನು ಕೌರವನೊಡನೆ ಜೂಜಾಡಿ ರಾಜ್ಯಕೋಶಗಳನ್ನು ಅವರಿಗೆ ಸೋತು, ತಮ್ಮಂದಿರೊಡನೆಯೂ, ಹೆಂಡತಿಯಾದ ದ್ರೌಪದಿಯೊಡನೆಯೂ ಹನ್ನೆರಡು ವರುಷಕಾಲ ವನವಾಸವನ್ನು ಅನುಭವಿಸಬೇಕಾಯಿತು. ಆಗ ಧರ್ಮರಾಯನು ತನ್ನಂತೆ ಲೋಕದಲ್ಲಿ ಕಷ್ಟಪಟ್ಟವರುಂಟೇ ಎಂದು ಯಾವಾಗಲೂ ಮರುಗುತ್ತಿದ್ದನು. ಹೀಗಿರಲು ಒಮ್ಮೆ ರೋಮಶ ಋಷಿಗಳು ಧರ್ಮರಾಜನಲ್ಲಿಗೆ ಬಂದು, ಅವನಿಗೆ ನಳದಮಯಂತಿಯರ ಕಥೆ ಹೇಳಿ, ಅವನನ್ನು ಸಮಾಧಾನಪಡಿಸಿದರು.

ಸಂಸ್ಕೃತ ಮಹಾಭಾರತದ ವನಪರ್ವದಲ್ಲಿ ಬರುವ ಈ ಕಥೆಯನ್ನು ತಿಳಿಯಾದ ಕನ್ನಡದಲ್ಲಿ ಕನಕದಾಸನೆಂಬ ಕವಿ ಭಾಮಿನೀ ಷಟ್ಪದಿಯ ರೂಪದಲ್ಲಿ ಹೇಳಿದ್ದಾನೆ. ಆ ಕಥೆಯನ್ನೇ ಮುಂದೆ ಸಂಗ್ರಹಿಸಿದೆ.

# ನಳಚರಿತ್ರೆಯ ಸಂಗ್ರಹ

---

## ೧. ಮಂಗಳಾಚರಣೆ

ಶ್ರೀರಮಣ ಸರಸಿಜದಳಾಕ್ಷ ಮು
ರಾರಿ ಸಚರಾಚರ ಭರಿತ ದುರಿ
ತಾರಿ ನಿತ್ಯಾನಂದ ನಿರ್ಜರ ನಿಕರ ದಾತಾರ
ವಾರಿಜಾಂಬಕ ವರಗುಣಾಶ್ರಯ
ಮಾರಪಿತ ವೇದಾಂತನುತ ವರ
ಪೌರ ಚೆನ್ನಿಗರಾಯ ಪಾಲಿಸು ನಮಗೆ ಸತ್ಕೃಪೆಯ ೧

ಕರಿವದನ ಹೇರಂಬ ಲಂಬೋ
ದರ ಚತುರ್ಭುಜ ಮೋದಕಪ್ರಿಯ
ಪರಶು ಪಾಶಾಂಕುಶ ಕರಾಂಕಿತದಿಂದ ರಂಜಿಸುವ
ಸುರ ನರೋರಗ ನಮಿತ ಗೌರೀ
ವರಕುಮಾರಕ ವಿದ್ಯವಾರಿಧಿ
ವರದ ಗಣಪತಿ ಪಾಲಿಸೆನ್ನೆಯ ಮತಿಗೆ ಮಂಗಳವ ೨

ನಾರಿ ನಳಿನದಳಾಕ್ಷಿ ವರಜಂ
ಭಾರಿ ನುತೆ ಚತುರಾನನ ಪ್ರಿಯೆ
ಭೂರಿ ಗುಣಗಣಭರಿತೆ ಭಕ್ತಾಶ್ರಿತ ಜನಾಧಾರೆ
ನೀರೆ ನಿಗಮವಿಚಾರೆ ಘನ ಶೃಂ
ಗಾರೆ ಭಜಕರಿಗೆ ವರವೀವವು
ದಾರೆ ಶಾರದೆ ನಲಿದೊಲಿದು ನೆಲಸೆನ್ನ ಜಿಹ್ವೆಯಲಿ ೩

ರಾಯರೊಳಗಗ್ಗಳೆಯನಹ ಕೌಂ
ತೇಯನಿಗೆ ರೋಮಶ ಮಹಾಮುನಿ
ರಾಯ ವಿಸ್ತರಿಸಿದನು ನಳಭೂವರನ ಚರಿತೆಯನು
ಪ್ರೀಯದಿಂದಾಲಿಪುದು ಸುಜನರು
ಶ್ರೀಯರಸ ವರಪುರದ ಚೆನ್ನಿಗ
ರಾಯನಂಕಿತಮಾಗಿ ಪೇಳುವೆನೀ ಮಹಾಕಥೆಯ ೬

ಪರಮ ಪುಣ್ಯಚರಿತ್ರವಿದನಾ
ದರಿಸಿ ಕೇಳುವ ನರರ ಜನ್ಮಾಂ
ತರದ ಘನ ದುಷ್ಕರ್ಮ ದುಃಖವಿನಾಶ ದುರಿತಹರ
ಕರಿ ತುರಗ ರಥನಿಚಯ ರಾಜ್ಯದ
ಸಿರಿಯ ಸಂಪದವಾಯುವನು ಮುರ
ಹರನು ಮನ್ನಿಸಿ ಕೊಡುವ ಸುಜನರಿಗಿಷ್ಟಸಂಪದವ ೭

## ೨. ದಮಯಂತಿ ನಳನಲಿ ಚಿತ್ತವಿಟ್ಟಳು

ವಸುಧೆಪತಿ ಕೇಳೀ ಚರಿತ್ರೆಯ
ನಿಷಧವೆಂತೆಂಬಾ ಮಹಾಪುರ
ವೆಸೆದುದಗಣಿತ ಗೋಪುರ ಪ್ರಾಕಾರ ಶಿಖರದಲಿ
ಮಿಸುನಿ ರತ್ನಪ್ರಭೆಗಳಲಿ ರಂ
ಜಿಸುವ ದೇವಾಲಯಗಳಿರ್ದುದು
ವಸುಧೆಗಚ್ಚರಿಯೆನಿಸಿತಾ ಪುರವರಸ ಕೇಳೆಂದ ೧

ಮುಗಿಲ ತುಡುಕುವ ತೆನೆಗಳಾಳ್ವೇ
ರಿಗಳು ಪಾತಾಳಗಳ ಖಾತಗ
ಳಗಳು ಬಳಸಿದ ಕೋಟೆ ಸುತ್ತಾವರಿಸಿದುನ್ನತದ
ಗಗನವೀಥಿಯ ತಾರಕೆಯವೊಲ್
ಸೊಗಯಿಸುವ ಕನ್ನಡಿಯ ಸಾಲ್ಗೊಂ
ಬೆಗಳ ರತ್ನಪ್ರಭೆಗಳಲಿ ರಂಜಿಸಿದುದಾ ನಗರ ೨

ರವಿ ಶಶಿಯ ವೀಥಿಗಳ ಹೇಮದ
ವಿವಿಧ ಮಣಿ ಭಿತ್ತಿಗಳ ಕಾಂತಿಯು
ದಿವವನಣೆದುದು ರತ್ನನಿಚಯದ ಭದ್ರಭವನಿಕೆಯ
ಯುವತಿಯರ ಸಂಗೀತ ವೀಣಾ
ರವದ ರಹಿಯಲಿ ಮನಕೆ ಸವಿದೋ
ರುವ ಮಹಾರಚನೆಯಲಿ ಮೆರೆದುದು ನಿಷಧವರನಗರ ೩

ಭೂರಮಣ ಕೇಳಾ ಪುರಾಧಿಪ
ವೀರಸೇನ ನೃಪಾಲ ರಿಪುಸಂ
ಹಾರನಾತನ ತನಯ ನಳನೃಪನೆಂಬುದಭಿಧಾನ
ಭೂರಿ ವಿಕ್ರಮ ಪರಮಧರ್ಮ ವಿ
ಚಾರ ಶಶಿಕುಲಮೌಳಿ ಘನಗಂ
ಭೀರ ಪಾಲಿಸುತಿರ್ದ ಸಪ್ತದ್ವೀಪದವನಿಪರ ೪

ಶರಧಿ ಮೇರು ದಿಗಂತದವನೀ
ಶ್ವರರು ಕಪ್ಪವ ತೆರುವರಗಣಿತ
ಧುರವಿಜಯ ದೋರ್ವಳರು ಮಣಿಮಯ ಮಕುಟವರ್ಧನರು
ಚರಣಕಾನತರಾಗಿ ನಳಭೂ
ವರನ ಭಜಿಸುತಲಿರ್ದರಮರೇ
ಶ್ವರನ ವೋಲಗದಂತೆ ಮೆರೆದುದು ನೃಪತಿಯಾಸ್ಥಾನ ೫

ಭೂಮಿಪತಿ ಕೇಳಿತ್ತಲುತ್ತರ
ಭೂಮಿಯಲಿ ಪ್ರಜ್ವಲಿಸುತಿಹ ಸು
ತ್ರಾಮಪುರದಂತೆಸೆದುದಲ್ಲಿ ವಿದರ್ಭನಗರವದು
ರಾಮಣೀಯಕ ರಚನೆಯಲಿ ನವ
ಹೇಮ ರಚಿತ ಸುರತ್ನ ಸೌಧ
ಸ್ತೋಮಗಳ ಸಾಲಿನಲಿ ರಂಜಿಸುತಿರ್ದುದಾ ನಗರ ೬

ಅಲ್ಲಿಗಧಿಪತಿ ಭೀಮನೃಪ ಗುಣ
ದಲ್ಲಿ ನಯದಲಿ ವೀರ್ಯವಿತರಣ
ದಲ್ಲಿ ಚಾತುರ್ಯದಲಿ ಸೌಭಾಗ್ಯದಲಿ ಧೈರ್ಯದಲಿ
ಬಲ್ಲಿದನು ತಾನಾಗಿ ನಿಜಸುತ
ರಿಲ್ಲವೆಂದುಮ್ಮಳಿಸುತಿರೆ ಮನ
ದಲ್ಲಿ ಯಾಕ್ಷಣ ಬಂದನಾ ದಮನಾಖ್ಯ ಮುನಿವರನು

ಬಂದ ಮುನಿಗವನೀಶ ವಂದಿಸಿ
ನಿಂದು ಕರಗಳ ಮುಗಿದು ವಿನಯದೊ
ಳಂದು ಸುತ ಸಂತಾನವಿಲ್ಲದ ಸಿರಿಯದೇಕೆಂದು
ನೊಂದು ನುಡಿಯಲು ಸುತರ ಪಡೆಯದ
ತಂದೆಗಿದು ಸಂತಾಪವಲ್ಲವೆ
ಯೆಂದು ಮುನಿ ಕರುಣದಲಿ ಸಂತೈಸಿದನು ಭೂಪತಿಯ ೮

ಯೋಗದೃಷ್ಟಿಯೊಳರಿದು ಮುನಿವರ
ನಾಗ ನೃಪನೊಡನೆಂದ ವರಸುತ
ಯಾಗವನು ಮಾಡರಸ ತಪ್ಪದು ಪುತ್ರಲಾಭವೆನೆ
ಆ ಗರುವ ಮುನಿ ಮಂತ್ರದಿಂದ ಸ
ರಾಗದಲಿ ಶುಭದಿನ ಸುಲಗ್ನದಿ
ಯಾಗವನು ಪೂರೈಸಿದನು ಸುರ ನರರು ತಣಿವಂತೆ ೯

ಅರಸ ಕೇಳಾ ಯಾಗ ಸಮನಂ
ತರದೊಳಾ ಮುನಿಮುಖ್ಯರನು ಸ
ತ್ಕರಿಸಿ ಕಳುಹಿದನವರವರನುಚಿತೋಪಚಾರದಲಿ
ತರುಣಿಗಾದುದು ಗರ್ಭ ಮಂಗಳ
ಕರ ಸುಲಗ್ನ ಸುತಾರೆಯಲಿ ನೃಪ
ನರಸಿ ಪಡೆದಳು ತನುಜೆಯೊರ್ವಳ ಲೋಕಸುಂದರಿಯ ೧೦

ಅಮರ ದುಂದುಭಿ ಮೊಳಗಲಿಳೆ ಸಂ
ಭ್ರಮಿಸೆ ಪುರಜನ ನಲಿಯೆ ನೃಪನಾ
ಸಮಯದಲಿ ದಮನಾಖ್ಯಮುನಿಗಭಿನಮಿಸಿ ನಿಜಸುತೆಗೆ
ವಿಮಲನಾಮವ ಪಾಲಿಸೆನಲಾ
ಕಮಲಮುಖಿ ದಮಯಂತಿಯೆಂಬು
ತ್ತಮದ ಪೆಸರೆಂದೊರೆದು ಮುನಿ ಹೊರವಂಟನಾಶ್ರಮಕೆ ೧೧

ನಿರಿಗುರುಳ ಸಿರಿಮುಡಿಯ ಪವಳಾ
ಧರದ ತೋಳ್ಗಳ ಕಂಬುಕಂಠದ
ತರಳ ನಯನದ ಸಂಪಗೆಯ ನಾಸಿಕದ ಪೆರೆನೊಸಲ
ಹರಿಯ ಮಧ್ಯದ ಹಂಸಗಮನದ
ಗುರುಕುಚದ ಕರಪಲ್ಲವದ ಸರ
ಸಿರುಹಮುಖಿ ನಲಿದಾಡುತಿರ್ದಳು ರಾಜಭವನದಲಿ ೧೨

ಗುಣದೊಳಗೆ ಶೀಲದಲಿ ಮಾತಿನ
ಭಣಿತೆಯಲಿ ಗಾಂಭೀರ್ಯದಲಿ ವಿತ
ರಣದಿ ವೀಣಾರಚನೆಯಲಿ ಗುರುದೇವ ಭಕ್ತಿಯಲಿ
ಪ್ರಣುತಿಸಲು ಶರ್ವಾಣಿ ರತಿಯರಿ
ಗೆಣೆಯೆನಿಪ ಚೆಲುವಿಕೆಯ ಮಿಕ್ಕಿನ
ಬಣಗು ಸತಿಯರು ಸರಿಯೆ ಲೋಕದೊಳೆಂದನಾ ಮುನಿಪ ೧೩

ಕೇಳು ಪಾಂಡವತನಯ ಭೀಮನೃ
ಪಾಲನೋಲಗದಲ್ಲಿ ಧರಣೀ
ಪಾಲಕರ ಚರಿತ ಪ್ರಸಂಗದೊಳಿರಲು ನಳನೃಪನ
ಶೀಲವನು ಸೌಂದರ್ಯ ವಿಭವ ವಿ
ಶಾಲಮತಿ ಲಾವಣ್ಯ ನಿಪುಣ ಗು
ಣಾಳಿಗಳ ವಿಸ್ತರಿಸಿ ಕೊಂಡಾಡಿದರು ಕವಿಜನರು ೧೪

ವನಜಮುಖಿಯಾ ವಾರ್ತೆಯೆಲ್ಲವ
ಮನವೊಲಿದು ಕೇಳಿದಳು ಹಿಗ್ಗುತ
ನನೆದುದಂತಃಕರಣ ಹೆಚ್ಚಿದ ಚಿತ್ತವೃತ್ತಿಯಲಿ
ನೆನೆದು ಬರೆದಳು ನಳನ ರೂಪವ
ನನುನಯದಿ ಚಿತ್ರದಲಿ ಮಿಗೆ ಸಂ
ಜನಿಸಿತವನಲಿ ಮೋಹವೆಲೆ ಧರಣೀಶ ಕೇಳೆಂದ ೧೫

ಉಣ್ಣಳನ್ನವನಖಿಳ ವಸ್ತುವ
ಕಣ್ಣಿನಿಂದೀಕ್ಷಿಸಳು ಸಖಿಯರ
ಮನ್ನಣೆಗೆ ಮೈಗೊಡಳು ಬಲು ಬೇಸರದಿ ಬಳಲುವಳು
ಬಣ್ಣಿಸಳು ಮಾತಾಡಲೊಲ್ಲಳು
ಬಣ್ಣಗುಂದಿದ ದೇಹದಲಿ ಯೆಳ
ವೆಣ್ಣುಗಳ ಸೌಖ್ಯವನು ಮರೆದಳು ಮದನನೆಸುಗೆಯಲಿ ೧೬

ಕೆಳದಿಯರು ಕಂಡಂತರಂಗದಿ
ಬಲಿದ ವಿರಹವ ರಾಜವದನೆಯು
ಹೊಳಲೊಳುದ್ಯಾನದಲಿ ಸುರುಚಿರ ಪುಷ್ಪತರುಗಳಲಿ
ಎಳದಳಿರ ನೆಳಲಿನಲಿ ಪರಿಮಳ
ದಲರ ಪನ್ನೀರಿನಲಿ ಸಖಿಯರು
ನಲವು ಹಿಂಗಿದ ಸತಿಯನುಪಚರಿದರು ಪಲತೆರದಿ ೧೭

ಕೇಳು ಕುಂತೀತನಯ ಭೀಮನೃ
ಪಾಲತನುಜೆಗೆ ವಿರಹ ಬಲಿದು ವಿ
ಶಾಲವಾಗಿರಲತ್ತ ಕೇಳೈ ನಿಷಧನಗರಿಯನು
ಪಾಲಿಸುವ ನಳಚಕ್ರವರ್ತಿಯು
ವೋಲಗದ ರಚನೆಯಲಿ ರತ್ನದ
ಸಾಲು ಹೊಳಹಿನ ಸಿಂಹಪೀಠದೊಳೆಸೆದು ಕುಳ್ಳಿರ್ದ ೧೮

ಆ ಸಮಯದಲಿ ಬಳಿಗೆ ಬಂದಾ
ದೇಶಯಾತ್ರಿಕ ಭೂಸುರನನವ
ನೀಶ ಕೇಳಿದನಿಳೆಯೊಳೇನು ವಿಶೇಷವೆಂದೆನುತ
ಭೂಸುರೋತ್ತಮನೆಂದನೆಲೆ ಧರ
ಣೀಶ ಕೇಳು ವಿದರ್ಭನಗರಿಯೊ
ಳೀಸು ಪುಣ್ಯೋದಯದಿ ಪಡೆದನೊ ಭೀಮನೃಪ ಸುತೆಯ ೧೯

ಅವಳ ರೂಪಗುಣಾತಿಶಯಗಳ
ನೆವಗೆ ಬಣ್ಣಿಸಲಾಗ ಕೇಳಾ
ಯುವತಿ ಲೋಕದ ಸತಿಯು ಬಗೆಯಂತಲ್ಲ ಭಾವಿಸಲು
ಪ್ರವಿಮಲಾಕಾರದಲಿ ನೋಡಲು
ಸವಿನುಡಿಯ ಸೊಬಗಿನಲಿ ನಯದಲಿ
ಭುವನದಲಿ ಕಂಡಿಲ್ಲ ದಮಯಂತಿಗೆ ಸಮಾನರನು ೨೦

ಹೇಳುತಿರೆ ನುಡಿನುಡಿಗೆ ಮೆಚ್ಚುತ
ಕೇಳಿ ತಲೆದೂಗಿದನು ನೈಷಧ
ನಾಲಿಗಳಿಗೆ ಸರೋಜಮುಖಿ ಗೋಚರಿಸಿದಂತಾಗೆ
ಬಾಲಿಕೆಯು ಮೋಹಿಸಿದ ಪುಷ್ಪ ಶ
ರಾಳಿಯಲಿ ಮನನೊಂದು ಶಿವಶಿವ
ಲೋಲಲೋಚನೆಯೆಂತು ತನಗಹಳೆಂದು ಚಿಂತಿಸಿದ ೨೧

ವನಿತೆಗುಣಗಳನೊಂದನೊಂದನು
ಮನದೊಳಗೆ ಸವಿಮಾಡಿ ತರುಣಿಯು
ನೆನೆದು ಹೊಂಪುಳಿವೋಗಿ ವಿರಹದಿ ಮದನಗೀಡಾಗಿ
ಕವಿದ ಬೆಸನದಿ ಕಾಯಕುಂದಿದ
ಜನಪ ನಳನಿರೆ ಬೇಂಟೆಕಾರರ
ಜನನಿವಹದಿಂ ಬಂದರಾ ಸಮಯದಲಿ ವನಚರರು ೨೨

ಬಂದು ಫಲವಸ್ತುಗಳ ಕಾಣಿಕೆ
ಯಿಂದ ಕೈಮುಗಿದರಸ ವೃನಘಗ
ವಿಂದು ಬೇಂಟೆಗೆ ಗಮಿಸಬೇಕೆನೆ ನೃಪತಿ ನಸುನಗುತ
ಇಂದು ವಿರಹವ ಕಳೆವ ಪರಿಲೇ
ಸೆಂದು ಶಬರರ ಕಳುಹಿಯೋಲಗ
ದಿಂದಲರಮನೆಗೆಯ್ದಲಸ್ತಾಂಬುಧಿಯೊಳಿನನಿಳಿದ ೨೩

ನಳಿನಸಖನುದಯದಲಿ ನಳನೃಪ
ತಿಲಕ ಕರಸಿದ ಸಕಲ ದಳವನು
ಹೊಳೆವ ಕಡುಗ ಕಠಾರಿ ಮೊದಲಾದಖಿಳ ಕೈದುಗಳ
ಬಲುಭಟರು ಬೇಂಟೆಯಲಿ ನಾನಾ
ಬಲೆಗಳಂಟೆನ ಕೋಲುಕಣ್ಣಿಯ
ಚಲಯುತರು ಸಂದಣಿಸಿ ಮೆರೆದುದು ಪುರದ ಬಾಹೆಯಲಿ ೧೪.

ಅರಸ ಕೇಳ್ ಶಶಿಕುಲ ಶಿರೋಮಣಿ
ಧರಿಸಿದನು ನವರತುನಮಯದಾ
ಭರಣಗಳ ದಿವ್ಯಾಂಬರಾದಿ ಸುಗಂಧ ಲೇಪದಲಿ
ತರಿಸಿ ಏರಿದ ವಾಯುವೇಗದ
ತುರಗವನು ಸಂದಣಿಸಿ ಮೋಹರ
ತೆರಳಿತಗಣಿತ ವಾದ್ಯದಲಿ ನೆಲಬಿರಿಯಲೈತಂದ ೧೫.

ಏನ ಹೇಳುವೆನರಸ ಹೊಕ್ಕರು
ಕಾನನವ ಬಳಸಿದರು ಮೃಗತತಿ
ಯಾನಲಾಪುದೆ ತೆಗೆದು ಹಾಯ್ದುದು ಭಟರ ಘಲ್ಲಣೆಗೆ
ಆನೆಗಳ ಕೆಡಹಿದರು ಬಿಲು ಸಂ
ಧಾನದಲಿ ಹುಲಿ ಕರಡಿ ಮುಸು ಮೊಲ
ವಾನರಾದಿ ಸಮಸ್ತ ಮೃಗಗಳ ತರುಬಿ ಕೆಡಹಿದರು ೧೬.

ನಿಲಿಸಿ ಬೇಂಟೆಯನಲ್ಲಿ ಬಳಲಿದ
ಬಲಸಹಿತ ತಾ ಬಂದು ತತ್ಪುರ
ವಳಯದುದ್ಯಾನವನು ಹೊಕ್ಕನು ಬಲಿದ ವಿರಹದಲಿ
ನಲವು ಹಿಂಗಿದ ಮನದ ದುಗುಡದ
ಲಿಳಿದು ಕೊಳನಲಿ ಜಾನು ಜಂಘೆಯ
ತೊಳೆದು ಪರಿಹೃತಶ್ರಮನಾಗಿ ಚರಿಸಿದನು ವನದೊಳಗೆ ೧೭.

ಆ ಕೊಳನ ತೀರದಲಿ ತರುಗಳ
ನೇಕವದರೊಳಗೊಂದು ತಾಣದೊ
ಳೇಕವೃಕ್ಷದ ನೆರಳಿನಲಿ ನವಕುಸುಮದಿಕ್ಕೆಯಲಿ
ಆ ಕಮಲಜನ ತುರಗ ನಿದ್ರಾ
ವ್ಯಾಕುಲದಿ ಮಲಗಿರಲು ಕಂಡ ದಿ
ವಾಕರೋನ್ನತ ಶುಭ್ರತೇಜದ ರಾಜಹಂಸೆಯನು ೨೮

ಅರುಣಮಯದಾನನದ ಪದಯುಗ
ಗರಿಗಳುನ್ನತ ಧವಳದೇಹದ
ಪರಮ ತೇಜದೊಳೆಸೆವ ಹಂಸೆಯ ಕಂಡು ಬೆರಗಾಗಿ
ಹರಹರ ಇದರಾಯತವ ಮುರ
ಹರನು ತಾನೇ ಬಲ್ಲನೆನುತ
ಕ್ಕರದಿ ಮೆಲ್ಲನೆ ಕರವ ನೀಡುತ ಪಿಡಿದ ಹಂಸೆಯನು ೨೯

ಒದರಿ ಕುಣಿಯಲು ಹಸ್ತದೊಳಗದ
ಕದಲದಂದದಿ ಪಿಡಿಯಲರಸನ
ವದನಕಮಲವ ನೋಡಿ ಹೆದರಿತು ಪ್ರಾಣಭೀತಿಯಲಿ
ಹೃದಯ ಕರಗುವ ಮಾತನೆಂದುದು
ಮದಕರಿಗೆ ನೊರಜಂತರವೆ ಕೈ
ಸದರದವರನು ಕೊಲುವುದೇನರಿದೆಂದುದಾ ಪಕ್ಷಿ ೩೦

ಕರಿಗಳನು ಮುರಿದಿಡುವ ಸಿಂಹಕೆ
ನರಿಗಳಿದಿರೇ ತಾನು ನಿಮಗಂ
ತರವೆ ಸಾಕಂತಿರಲಿ ಕಂಡವರೆಲ್ಲ ನಗದಿಹರೆ
ಅರಿ ಭಯಂಕರ ಶತ್ರುಗಳ ಸಂ
ಹರಿಸುವುದು ನೃಪನೀತಿ ನಿನಗಿದು
ತರವೆ ಬಿಡು ಪರಹಿಂಸೆ ದೋಷವಿದೆಂದುದಾ ಪಕ್ಷಿ ೩೧

ಬಡಬಗೌತಣವಿಕ್ಕುವೆಡೆಯೊ
ಕ್ಕುಡಿತೆ ಹಾಲೇ ಮಂಜು ಸುರಿಯಲಿ
ಕೊಡನೆ ಕೆರೆ ತುಂಬುವುದೆ ನೃಪ ನೀನೆನ್ನ ಭುಂಜಿಸಲು
ಒಡಲಿಗಾಪ್ಯಾಯನವಹುದೆ ಕೇಳ್
ಪೊಡವಿಪತಿ ಬಿಡು ನನ್ನ ಮನೆಯಲಿ
ಮಡದಿ ಮಕ್ಕಳ ಗೋಳ ನೋಡೆಂದೊರಲಿತಾ ಹಂಸೆ ೩೨

ಮರನ ಹುತ್ತವನೇರಿದರ ಸಂ
ಗರದಿ ದೈನಂಬಡುವರಾಯುಧ
ಮುರಿದ ಬರಿಗೈಯವರ ನೀರೊಳು ಹೊಕ್ಕು ನಿಂದವರ
ತರುಣಿಯರ ಮರೆಗೊಂಡವರ ನಿ
ಬ್ಬರದಿ ಮುರಿದೋಡುವರ ನಿದ್ರಾ
ಭರದೊಳಿರ್ದರ ಕೊಲುವುದನುಚಿತವೆಂದುದಾ ಹಂಸೆ ೩೩

ನುಡಿಗೆ ನಾಚಿದನರಸ ಹಂಸೆಯ
ನಡವಳಿಗೆ ಮೆಚ್ಚಿದನು ನಿನ್ನನು
ಹಿಡಿದು ಕೊಲುವವನಲ್ಲ ನಿನ್ನಾಲಯಕೆ ಪೋಗೆನುತ
ಬಿಡಲು ರೆಕ್ಕೆಯ ಕೊಡಹಿ ಹಾರಿತು
ಒಡನೆ ಮರಳಿತು ಧರೆಗೆ ರಾಯನ
ಕಡೆಗೆ ವಂದಿಸಿ ಮುದದಿ ನುಡಿದುದು ನೃಪಗೆ ವಿನಯದಲಿ ೩೪

ಭೂರಮಣ ಕೇಳಸುವ ಕಾಯ್ದುಪ
ಕಾರ ಮಾಡಿದೆ ನೀನು ನಿನಗುಪ
ಕಾರ ಮಾಡುವೆನೆನಲದೇನೆಂದರಸ ಬೆಸಗೊಂಡ
ಸಾರಹೃದಯನೆ ಚಿತ್ತವಿಸು ವಿ
ಸ್ತಾರದಂದಿರಹುವೆನು ಭುವನದೊ
ಳಾರಿಗುಂಟೇ ಪರಮಸುಕೃತಗಳೆಂದುದಾ ಪಕ್ಷಿ ೩೫

ಅರಸ ಕೇಳತಿದೂರದಲಿ ಸುರ
ಪುರವ ಪೋಲ್ವ ವಿದರ್ಭಪಟ್ಟಣ
ದರಸು ಭೀಮನೃಪಾಲನಾತನ ತನುಜೆ ದಮಯಂತಿ
ಪರಮ ಪುಣ್ಯಾಂಗನೆ ಮಹಾ ಸೌಂ
ದರಿ ನಿಪುಣೆ ಗಜಗಮನೆ ನಯಗುಣ
ಭರಿತೆ ಸೊಬಗಿನ ಸೋನೆ ತಾನಿಹಳಲ್ಲಿ ವನಜಾಕ್ಷಿ ೩೬

ಕ್ಷಿತಿಯೊಳಿಹ ಸತಿಯರಲಿ ಅಮರಾ
ವತಿಯೊಳಿಹ ಸ್ತ್ರೀಯರಲಿ ಮೇಣಾ
ವಿತಳದಲ್ಲಿಹ ನಾರಿಯರಲೀಕ್ಷಿಸಿದೆನವಳಿಂಗೆ
ಪ್ರತಿಯ ಕಾಣೆನು ರೂಪಿನಲಿ ನೀ
ನತಿ ಚೆಲುವ ನಿನಗವಳು ಪಾಸಟಿ
ಸತಿಗೆ ನೀನೇ ರಮಣನಲ್ಲದೆ ಕಾಣೆನಿತರರನು ೩೭

ಅವಳ ನಿನಗೊಲಿವಂತೆ ಮಾಡುವೆ
ಶಿವನ ಕೃಪೆ ನಿನಗುಂಟು ನಮ್ಮಲಿ
ಸವಡಿನುಡಿಯಿಲ್ಲರಸ ನಂಬುವುದೆನ್ನ ನೀನೆನಲು
ಅವನಿಪತಿ ನಸುನಗುತ ಹಂಸೆಯ
ಸವಿನುಡಿಗೆ ಮನಸೋತು ವಿರಹದ
ತವಕದಲಿ ಹೇವರಿಸಿ ನುಡಿದನು ನೃಪತಿ ಖಗಪತಿಗೆ ೩೮

ಮನಸಿಜನ ಶರಹತಿಗೆ ನೊಂದೆನು
ತನುವ ಸೈರಿಸಲಾರೆನೆನಗಾ
ಯುವತಿಯನು ತಂದಿತ್ತು ಸಲಹೆನ್ನಸುವ ಕರುಣದಲಿ
ಎನಗೆ ನೀನೇ ಪರಮಬಾಂಧವ
ಮನಕೆ ಹರುಷವ ಮಾಡು ನೀನೀ
ಬನಕೆ ಬಹ ಪರಿಯಂತ ತಾನಿಲ್ಲಿಹೆನು ಹೋಗೆಂದ ೩೯

ಕೇಳು ಧರ್ಮಜ ನಳನೃಪಾಲನ
ಬೀಳುಕೊಂಡು ಸರಾಗದಿಂದವ
ನಾಲಯುವ ಹೊರವಂಟು ತೆರಳಿತು ವಾಯುವೇಗದಲಿ
ಆ ಲತಾಂಗಿಯ ಪತಿಯ ಕೀರ್ತಿವಿ
ಶಾಲವಾದಂದದಲಿ ರಾಜಮ
ರಾಳ ಗಗನಕೆ ಹಾಯ್ದು ಕಂಡಿಳಿತಂದುದಾ ಪುರಕೆ ೪೦

ಕನಕ ಮಣಿ ನಿರ್ಮಿತದ ಸೌಧದಿ
ಜನನಿಕರ ಸಂದೋಹದಲಿ ಉಪ
ವನದ ವೀಧಿಗಳೆಸೆದು ಮೆರೆವ ವಿದರ್ಭಪಟ್ಟಣಕೆ
ಮನವೊಲಿದು ನಿಜಬಳಗದೊಡನಂ
ಗನೆಯರೋಲಗದಲ್ಲಿ ಮದನನ
ಮೊನೆಯಲಗಿನಲಿ ಬಳಲುವ ಸತಿಯಳ ಕಂಡುದಾ ಹಂಸೆ ೪೧

ತಳಿತ ಮೇಘದಿ ಹೊಳೆವ ಮಿಂಚಿನ
ಬಳಗವೆನೆ ಹಂಸೆಗಳು ನಭದಿಂ
ದಿಳಿಗಿಳಿದು ಸತಿಯರ ಸಭಾಮಂಡಲದಿ ಕುಳ್ಳಿರಲು
ನಳಿನಲೋಚನೆ ಕಂಡು ಪಕ್ಷಿಯ
ಲಲನೆಯರ ಮೋಗ ನೋಡಿ ಹಂಸೆಯ
ಚೆಲುವ ಬಣ್ಣಿಸಿ ಪಿಡಿಯಬೇಕೆಂದೆನುತ ಗಮಿಸಿದಳು ೪೨

ಮೆಲ್ಲಮೆಲ್ಲನೆ ಅಡಿಯಿಡುತ ಕರ
ಪಲ್ಲವವ ಚಾಚಿದಳು ನೂಪುರ
ಘಲ್ಲುಘಲಿರೆನೆ ಹಿಂದುಹಿಂದಕೆ ಸರಿದುದಾ ಹಂಸೆ
ನಿಲ್ಲದಂಗೈಸುತ್ತ ಬರಲ
ಲ್ಲಲ್ಲಿಗಡರಿತು ಕುಸುಮಮಯ ನವ
ಮಲ್ಲಿಗೆಯ ಬನದೊಳಗೆ ಹೊಕ್ಕುದು ಹೊದರ ಹೊಸಮೆಳೆಯ ೪೩

ಕೆಳದಿಯರ ಕೆಲಕೊತ್ತಿ ತಾನೇ
ನೆಳೆಯು ಹೊಕ್ಕಳು ಬಾಗಿ ಸೆಳೆನಡು
ಬಳುಕೆ ಕುಚಭಾರದಲಿ ನೋಲುದು ಜಾರೆ ಮುಡಿ ಚದರೆ
ಜಲಜಮುಖಿ ಬೆಮರಿಡಲು ಕೊರಳಿನ
ಲಲಿತ ಮುಕ್ತಾಹಾರವಳ್ಳಾ
ಡಲು ಸೆರಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು ೪೪

ಎಲೆ ಸರೋರುಹಗಂಧಿ ನೀನೆ
ನ್ನೊಲಿದು ಮನದಲಿ ಹಿಡಿವೆನೆಂಬೀ
ಚಲವಿದೇಕೆ ಮಾಣು ನಾವಂಬರದ ಪಕ್ಷಿಗಳು
ಸಿಲುಕುವವರಾವಲ್ಲ ಬರಿದೇ
ಬಳಲದಿರು ತಾ ಬಂದ ಪರಿಯನು
ತಿಳುಹುವೆನು ನಿನಗೆಲ್ಲವನು ಕೇಳೆಂದುದಾ ಪಕ್ಷಿ ೪೫

ನಳಿನಮುಖಿ ನಳಚಕ್ರವರ್ತಿಯ
ಬಳಿಯ ವಾಹನವಾಗಿ ತಾನಿಹೆ
ನೊಲಿದು ಸಲಹುವನೆನ್ನ ಪರಮಪ್ರೀತಿವಚನದಲಿ
ಇಳೆಗೆ ನಳಕೂಬರ ಜಯಂತರ
ಚೆಲುವ ಮದನನ ರೂಪರೇಖೆಯ
ಹಳಿವುದಾ ನಳನೃಪನ ನಿಜಸೌಂದರ್ಯ ಲೋಕದಲಿ ೪೬

ನಿನ್ನ ರೂಪಿನ ಚೆಲುವ ನಳನೃಪ
ನುನ್ನತದ ಚೆಲುವಿಂಗೆ ಜಗದೊಳ
ಗಿನ್ನು ನಾ ಸರಿಕಾಣೆ ನಿಮಗಿರ್ವರಿಗೆ ಸಮನಹುದು
ಎನ್ನಲಾ ನುಡಿಗೇಳಿ ಹಂಸೆಗೆ
ತನ್ನ ಶಿರವನು ಬಾಗಿ ಗುಣಸಂ
ಪನ್ನೆ ನುಡಿದಳು ನಾಚಿ ನಸುನಗೆಯಿಂದ ವಿನಯದಲಿ ೪೭

ಪರಮಗುಣನಿಧಿ ಪಕ್ಷಿ ಕೇಳ್ ಬಾ 091303
ಹಿರನು ಪಾತಕ ಮದನನತಿ ನಿ
ಷ್ಠುರದೊಳೆಸೆಯಲು ಪುಷ್ಪಬಾಣದಿ ನೊಂದುದೆನ್ನೊಡಲು
ಕರುಣರಸಧಾರೆಯಲಿ ತಾಪವ
ಪರಿಹರಿಸಿ ಸಂತೋಷದಲಿ ನೀ
ಧರಣಿಪತಿ ನಳನೃಪಗೆ ಬಿನ್ನೈಸೆಂದಳಿಂದುಮುಖಿ ೪೮

ಪರರ ದುಃಖವ ಪರಿಹರಿಸಿ ಮಿಗೆ
ಪರರಿಗುಪಕಾರಾರ್ಥವೆಸಗಲು
ಪರಮಪುಣ್ಯವಿದೆಂದು ಪೇಳ್ವರು ಹಿರಿಯರಾದವರು
ಪರಮಬಾಂಧವ ನೀನೆನಗೆ ಸ
ತ್ಕರಿಸು ವಿರಹದಿ ನೊಂದವಳ ಕರೆ
ಕರೆಗೆ ಗುರಿಮಾಡದಿರು ಸಲಹೆಂದಳು ಸರೋಜಮುಖಿ ೪೯

ಬಲಿದ ವಿರಹಾಗ್ನಿಯಲಿ ನೊಂದೆನು
ಬಳಲಿದೆನು ತನುಬಾಡಿ ತಾಪದಿ
ನಲವು ಹಿಂಗಿತು ಭ್ರಮಣೆ ಹೆಚ್ಚಿತು ತ್ರಾಣವೆಳದಾಯ್ತು
ಹಲವು ಮಾತೇನಿನ್ನು ನಳನೃಪ
ತಿಲಕ ತಾ ಪತಿಯಲ್ಲದಲೆ ಭೂ
ತಳದ ಪುರುಷರು ಪಿತನ ಸಮ ಕೇಳೆಂದಳಿಂದುಮುಖಿ ೫೦

ಅರಸ ಕೇಳಾ ಹಂಸೆ ತರುಣಿಯ
ಕರುಣದಳತೆಯ ಕಂಡು ತಾ ಬಂ
ದಿರುವ ಕಾರ್ಯದ ಹದನು ಲೇಸಾಯ್ತೆಂದು ಮನದೊಳಗೆ
ಹರುಷ ಮಿಗೆ ಕೊಂಡಾಡಿ ಸತಿಯನು
ಕರೆದು ನುಡಿದುದು ನಿನಗೆ ನಳಭೂ
ವರನ ಪತಿಯನು ಮಾಳ್ಪೆನಂಜದಿರೆಂದುದಾ ಹಂಸೆ ೫೧

ಅಂತರಂಗದ ಬುದ್ಧಿಯನು ದಮ
ಯಂತಿಗೆಲ್ಲವನರುಹಿ ತರುಣಿಯ
ಸಂತವಿಟ್ಟಲ್ಲಿಂದ ಕಳುಹಿಸಿಕೊಂಡು ಬೇಗದಲಿ
ಮುಂ ತಳರ್ದು ಮಿಗೆ ತನ್ನ ಬಾಂಧವ
ಸಂತತಿಯನೊಡಗೊಂಡು ನಿಷಧನ
ಚಿಂತೆಯನು ಪರಿಹರಿಸಬೇಕೆಂದೈದಿತಾ ಹಂಸೆ ೫೨

ಬಂದ ಹಂಸೆಯ ಕಂಡು ಮುಖಕಳೆ
ಯಿಂದಲರಿದನು ನೃಪತಿ ಮನದಲಿ
ಯಿಂದುಮುಖಿ ತನಗೊಲಿದ ಹದನಹುದೆಂದು ಹರುಷದಲಿ
ಮುಂದಗಮನೆಯ ಕಂಡಿರೇ ಏ
ನೆಂದು ನುಡಿದಳು ಸತಿಯ ಬಗೆಯೇ
ನೆಂದು ಬೆಸಗೊಳೆ ನಸುನಗುತ ನೃಪಗೆಂದುದಾ ಪಕ್ಷಿ ೫೩

ಮಾನವಾಧಿಪ ಕೇಳು ಮನದನು
ಮಾನವನು ಬಿಡು ಗುಡಿಯ ಕಟ್ಟಿಸು
ನೀನೆನಿಸಿದಿಷ್ಟಾರ್ಥಫಲ ಸಿದ್ಧಿಸಿತು ಇನ್ನೇನು
ಮಾನನಿಧಿ ನೀ ಮುನ್ನ ಮಾಡಿದು
ದೇನು ಸುಕೃತವೊ ತರುಣಿ ನಿನ್ನನೆ
ಜಾನಿಸುವಳನವರತ ಮನ ಬೇರಿಲ್ಲವಾ ಸತಿಗೆ ೫೪

ಎಲೆ ನೃಪತಿ ದಮಯಂತಿಯನು ನಿನ
ಗೊಲಿಸಿ ಬಂದೆನು ಭಾಷೆ ಸಂದುದು
ಲಲನೆಯನು ನೀ ಮದುವೆಯಾಗಿನ್ನೆನ್ನ ಕಳುಹೆನಲು
ಬಳಲಿದಿರಿ ನಮಗೋಸುಗವೆ ಬಲು
ಹಳುವದಲಿ ತೊಳಲಿದಿರಿ ಕಷ್ಟವ
ಬಳಸಿದಿರಿ ಸಾಕಿನ್ನು ಗಮನಿಸಿರೆಂದು ಬೀಳ್ಕೊಟ್ಟ ೫೫



ದಮಯಂತಿ ನಳನಲಿ ಚಿತ್ತವಿಟ್ಟಳು

ಕೇಳು ಪಾಂಡವತನಯ ರಾಜಮ
ರಾಳ ತೆರಳಿದುದತ್ತ ನಳಭೂ
ಪಾಲನಿತ್ತಲು ಬಂದು ಹೊಕ್ಕನು ತನ್ನ ನಗರಿಯನು
ಆಳು ಮಂದಿಯ ಕಳುಹಿ ಮನದ ವಿ
ಶಾಲ ವಿರಹದ ತಾಪದಲಿ ಮಿಗೆ
ಕೇಳ ಮೇಳ ವಿನೋದ ವಿಭವವನುಳಿದನಾ ನೃಪತಿ ೫೬

ಅತ್ತಲಾ ದಮಯಂತಿ ನಳನಲಿ
ಚಿತ್ತವಿಟ್ಟಳು ನೃಪಗೆ ವಿರಹವು
ಹೊತ್ತಿತಾಕೆಯ ಮೇಲೆ ಇರ್ವರಿಗಾಯ್ತು ಸಂತಾಪ
ಚಿತ್ತಜನು ಪಾತಕನು ವಿರಹವ
ಹೊತ್ತಿಸಿದನಿಬ್ಬರಿಗೆ ಮದನನ
ಹೆತ್ತವನು ವರಪುರದ ಚೆನ್ನಿಗರಾಯ ಕರುಣಿಸಿದ ೫೭

## ೩. ಅರಸನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ

ಕೇಳು ಧರ್ಮಜ ನಳನ ರೂಪನು
ಕೇಳಲೀ ಹದನಾಯ್ತು ಸತಿಗೆ ನೃ
ಪಾಲನಂಗವು ಗೋಚರಿಸಲೆಂತಹುದೊ ವಿರಹಾಗ್ನಿ
ನಾಲಗೆಗೆ ದ್ರವವಿಲ್ಲ ಮಂಚದ
ಮೇಲೆ ಮಲಗಳು ಬಲಿದವಸ್ಥೆಯ
ಹೇಳಲಿನ್ನೇನರಸ ದಮಯಂತಿಯ ಮನೋವ್ಯಥೆಯ ೧

ಲಲನೆ ನಿದ್ರಾಂಗನೆಯನುಳಿದಳು
ಹೊಲಬು ತಪ್ಪಿದ ಮನದಿ ಸತಿಯರು
ಸುಳಿಯೆ ನಳನೃಪ ಬಂದನಿದೆಯಿದೆಯೆಂದು ಕಳವಳಿಸಿ
ನಿಲುಕಿ ನೋಡುವಳೊಮ್ಮೆ ಕಾಣದೆ
ಹಲುಬುವಳು ಮತ್ತೊಮ್ಮೆ ಕಂಡದ
ಕೆಳದಿಯರು ತಮ್ಮೊಳಗೆ ತಾವಾಲೋಚಿಸಿದರಲ್ಲಿ ೨

ವಿರಹ ಬಲಿದುದು ಸತಿಗೆ ನಾವಿದ
ನರಸಗರುಹುವೆವೆಂದು ಕೆಳದಿಯ
ರಿರದೆ ಬಂದರು ಭೀಮನೃಪಾಲನೋಲಗಕೆ ತವಕದಲಿ
ಅರಸಿಯರ ಮೇಳದಲಿ ಧರಣೀ
ಶ್ವರನು ಮೆರೆದಿರೆ ಬಂದು ವಿನಯದಿ
ತರುಣಿ ವಿರಹಕೆ ತನುವ ತೆತ್ತಿಹಳೆಂದರಬಲೆಯರು ೩

ಕೇಳಿದನು ನಸುನಗುತ ಭೀಮನೃ
ಪಾಲ ತನ್ನಾತ್ಮಜೆಗೆ ಯೌವನ
ವೇಳಿಗೆಯಲಾ ವರನದಾರೆಂದೆನುತ ಚಿಂತೆಯಲಿ
ಓಲಗಕೆ ನಡೆತಂದು ಬರೆಸಿದ
ನೋಲೆಗಳ ಕಳುಹಿದನು ಧರಣೀ
ಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ ೪

ಹರಿದರರಸಾಳುಗಳು ದಿಕ್ಕುಗ
ಳರಸುಗಳ ನಗರಿಗಳಿಗಿತ್ತತ್ತಲು
ಪುರವ ಸಿಂಗರಿಸಿದರು ಭೀಮನೃಪಾಲನಾಜ್ಞೆಯಲಿ
ತರಿಸಿದರು ಭಂಡಾರದಲಿ ಪರಿ
ಪರಿಯ ನೂತನ ವಸ್ತುಗಳ ವಿ
ಸ್ತರಿಸಿ ಕಟ್ಟಿದರಗಲದಲಿ ವೈವಾಹ ಮಂಟಪವ ೫

ಹೊಳೆವ ದಂತದ ಕಂಬಗಳ ಪು
ತ್ತಳಿಯ ಸಾಲಿನ ಮೇಲುಕಟ್ಟಿನ
ತಳಿರ ತೋರಣಜೋರಣದ ಲೋವೆಗಳ ಅರಳೆಲೆಯ
ಬಿಳಿಯ ಮುತ್ತಿನ ಸರದ ಪವಳದ
ಬಿಳಿಯ ಚವುರಿಯ ಮೇಲುಕಟ್ಟಿನ
ಹೊಳವು ಮಿಗೆ ರಚಿಸಿದರು ಸತಿಯ ವಿವಾಹ ಮಂಟಪವ ೬

ಮಾಳವಾಂಧ್ರ ಕಳಿಂಗ ಕೋಸಲ
ಚೋಳ ಮತ್ಸ್ಯ ವರಾಳ ಕೊಂಕಣ
ಗೌಳ ಕುಂತಳ ಮಗಧ ಬರ್ಬರ ಪಾಂಡ್ಯ ಕರ್ಣಾಟ
ಲಾಳ ವಂಗ ಸುರಾಷ್ಟ್ರ ಕುರು ನೇ
ಪಾಳ ಘೂರ್ಜರ ಸಿಂಧು ಮರು ಪಾಂ
ಚಾಳ ಮೊದಲಾದಖಿಳ ಧರಣೀಪಾಲರೈದಿದರು ೭

ಆ ಸಮಯದಲಿ ನಾರದನು ಹರಿ
ವಾಸುದೇವಾ ಎಂದು ವೀಣೆಯ
ನಾಸುರದ ರಹಿಯಿಂದ ನುಡಿಸುತ ಮುನಿಗಳೊಗ್ಗಿನಲಿ
ವಾಸವನ ಸಭೆಗೈತರಲು ಸಂ
ತೋಷದಿಂದಿದಿರೆದ್ದು ಘನ ಸಿಂ
ಹಾಸನದಿ ಕುಳ್ಳಿರಿಸಿ ಕೈಮುಗಿದೆಂದನಮರೇಂದ್ರ ೮

ಎತ್ತಣಿಂದೈತಂದಿರುರ್ವಿಯೊ
ಳುತ್ತಮರು ಧರಣೀಶರಲಿ ನೆರೆ
ಸತ್ಯ ಧರ್ಮ ಸುಶೀಲರಾರುಂಟಲ್ಲಿ ಗುಣವೇನು
ಚಿತ್ತವಿಸಿ ಮುನಿನಾಥ ಎನಗದ
ಬಿತ್ತರಿಸಿ ಹೇಳೆನಲು ಸುರಮುನಿ
ಚಿತ್ತದಲಿ ನಸುನಗುತ ನುಡಿದನು ಪಾಕಶಾಸನಗೆ ೯

ಅಮರಪತಿ ಕೇಳವನಿಯಲಿ ಭೂ
ರಮಣರುಂಟು ಅನೇಕರವರೊಳು
ನಿಮಗೆ ಪೇಳ್ವೆ ವಿದರ್ಭಪುರಪತಿ ಭೀಮನೃಪ ತನುಜೆ
ಕಮಲಮುಖಿ ದಮಯಂತಿಗೆವ್ವನ
ಸಮತಳಿಸಲುಚಿತದಿ ಸ್ವಯಂವರ
ಕಮಿತಬಲ ನೃಪರ್ಬ್ಯದುತಿರ್ಪರು ಧರಣಿಯಗಲದಲಿ ೧೦

ಅಲ್ಲಿ ನೆರೆದ ಸಮಸ್ತ ಧರಣೀ
ವಲ್ಲಭರನೇನೆಂಬೆ ಪಟ್ಟಣ
ವೆಲ್ಲ ನೆರೆದುದು ದೇಶದೇಶಾಂತರದ ಯಾಚಕರು
ನಿಲ್ಲದೈತರುತಿದೆ ವಿವಾಹವ
ನಲ್ಲಿ ನೋಡುವೆನೆನುತ ಮುನಿಕರ
ಪಲ್ಲವದ ವೀಣೆಯಲಿ ಹಂಸೆಯನೇರಿ ಹೊರವಂಟ ೧೧

ಅರಸ ಕೇಳಮರೇಂದ್ರನಾ ಮುನಿ
ವರನ ವಚನವ ಕೇಳಿ ಹೆಚ್ಚಿದ
ವಿರಹದಲಿ ಕರಸಿದನು ಸತಿಯುರನೆಂದನೀ ಹದನ
ಪರಮಸತಿ ದಮಯಂತಿಯನು ಉಪ
ಚರಿಸಿ ತನಗೊಲಿವಂತೆ ಮಾಡೆಂ
ದುರುತರದ ವಸ್ತುಗಳನಿತ್ತು ಬಲೆಯುರ ಕಳುಹಿದನು ೧೨

ತರಿಸಿಯೇರಿದ ದಿವ್ಯರಥವನು
ಕರಸಿದನು ಯಮ ವರುಣ ವಾಯು
ವ್ಯರು ಸಹಿತ ಹೊರವಂಟನಮರಾವತಿಯನಮರೇಂದ್ರ
ಧರೆಗಿಳಿದು ಬರೆ ಮುಂದೆ ಮಾರ್ಗದಿ
ಸ್ಮರನ ರೂಪಿನ ನೈಷಧನ ಕಂ
ಡರು ಮನೋರಾಗದಲಿ ಕಾಣಿಸಿಕೊಂಡರುಚಿತದಲಿ ೧೩

ನಳಿನಮಿತ್ರನ ತೇಜದವೊಲಿಳೆ
ಗಿಳಿವ ಮಹಿಮರ ಕಂಡು ರಥದಿಂ
ದಿಳೆಗಿಳಿದು ಭಕ್ತಿಯಲಿ ನಳ ಕೈಮುಗಿದು ನಿಂದಿರಲು
ತಳಿತ ಹರುಷಾನಂದದಲಿ ಬರ
ಸೆಳೆದು ಬಿಗಿಯಪ್ಪಿದರು ರಾಯನ
ಚೆಲುವನೀಕ್ಷಿಸಿ ನಲಿದು ಕೊಂಡಾಡಿದರು ಮನವೊಲಿದು ೧೪

ಕುಶಲವೇ ನಳನೃಪತಿ ಬಾರೈ
ಶಶಿಕುಲೋದ್ಭವ ನಿನ್ನ ಪಿತನೀ
ವಸುಧೆಗಧಿಪತಿ ವೀರಸೇನನು ಪರಮಸಖನೆಮಗೆ
ಒಸೆದು ಬೇಡುವ ಕಾರ್ಯವಿದು ಭರ
ವಸದಿ ಬಂದೆವು ನಮಗೆ ಫಲಸಿ
ದ್ಧಿಸಿತು ಉಪಕಾರಾರ್ಥ ನಿನ್ನಿಂದಾಗಬೇಕೆಂದ ೧೫

ಕರಿಗಮನ ಚಿತ್ತವಿಸು ನಾವೇ
ನರರು ನಿಮಗಂತರವೆ ಸಾಕಂ
ತಿರಲಿ ನಿಮ್ಮ ಪದಾಬ್ಜ ದರುಶನವಾದುದಿಂದಿನಲಿ
ಹರುಷ ಮಿಗೆ ನಮಗೇನು ಬುದ್ಧಿಯ
ಕರುಣಿಸುವಿರವ ಮಾಳ್ಪೆವೆನೆ ಶಚಿ
ಯರಸನಾ ನುಡಿಗೇಳಿ ನಗುತಿಂತೆಂದನಾ ನೃಪಗೆ ೧೬

ಭೂತಳದೊಳಿಹ ಸತಿಯರಲಿ ರೂ
ಪಾತಿಶಯೆ ದಮಯಂತಿಯೆನಲಾ
ಮಾತಿನಲಿ ಮನವೊಲಿದುದವಳಲಿ ಎಮಗೆ ನೀ ಹೋಗಿ
ಆ ತಳೋದರಿಗುಚಿತ ವಚನವ
ಪ್ರೀತಿ ಪೂರ್ವಕದಿಂದ ಸತಿಯಳ
ನೀ ತಿಳುಹಿಯನುಕೂಲವನು ಮಾಡೆಂದನಮರೇಂದ್ರ ೧೭

ಈತ ಪಿತೃಪತಿಯಮರಪತಿ ತಾ
ನೀತ ವರುಣನು ವಾಯುವೀತನು
ಮಾತ ಮನ್ನಿಸು ಮಾಡು ತನಗುಪಕಾರವನು ನೀನು
ಈ ತತುಕ್ಷಣದೃಶ್ಯವರವನು
ಪ್ರೀತಿಯಿಂದೊಲಿದಿತ್ತೆವಿಂದಿನೊ
ಳಾ ತಳೋದರಿಯೊಲಿವ ಹದನನು ಮಾಡು ಹೋಗೆಂದ ೧೮

ಕೇಳಿದಾ ಮಾತಿನಲಿ ಚಿಂತೆಯ
ತಾಳಿದನು ಚಿತ್ತದಲಿ ನಳನೃಪ
ಲೋಲಲೋಚನೆ ತನ್ನನೇ ಪತಿಯೆಂದು ಬಯಸಿಹಳು
ಆ ಲತಾಂಗಿಯ ಮೇಲೆ ವಿರಹ ವಿ
ಶಾಲ ಮನವಿಹುದಿನ್ನು ಶಿವಶಿವ
ಬಾಲಿಕೆಯ ಜೆಸಗೊಳಲು ನಾಲಗೆಯೆಂತು ತನಗೆಂದ

ಎಂದು ಮನದೊಳು ಮರುಗಿ ವಿನಯದೊ
ಳೆಂದನೆಲೆ ಅಮರೇಂದ್ರ ನಿಮಗಾ
ಮಂದಗಮನೆಯನೊಳಗು ಮಾಡೆಂದೆನಗೆ ಪೇಳ್ವಿರಲಾ
ಹಿಂದುಗಳೆದರೆ ಮನಕೆ ಖತಿ ನಿಮ
ಗಿಂದು ಬಾರದೆ ಬಿಡದು ಲೋಕದಿ
ಇಂದುಮುಖಿಯರ ಗುಣವ ತಿಳಿಯಲಸಾಧ್ಯ ಕೇಳೆಂದ ೨೦

ಸಾವಿಗೆಣಿಸರು ಮನದಿ ಸತ್ಯವ
ಭಾವಿಸರು ಹುಸಿಯೊಲುಮೆದೋರುವ
ರಾವ ಪರಿಯಲಿ ಹೃದಯಗೊಡದನೃತಗಳನಾಡುವರು
ಪಾಪಿ ವರ್ತನವಿಲ್ಲ ಸತ್ಯಕೆ
ಪಾವಕನ ಮುಟ್ಟುವರು ಸತಿಯರ
ನಾವ ಪರಿಯಲಿ ನಂಬಬಹುದೈ ಎನುತ ಹೊರವಂಟ ೨೧

ನಲವು ಹಿಂಗಿದ ಮನದಿ ನೃಪ ಮಾ
ರ್ಗಲವನಲ್ಲಿಯೆ ನಿಲಿಸಿ ಬರುತಿರೆ
ತಳಿತ ರತ್ನ ಪ್ರಭೆಯ ಸಾಲಿನ ಸೌಧ ಪಂಕ್ತಿಗಳ
ಹೊಳೆವ ಕಲಶದ ಗೋಪುರದ ಕೊ
ತ್ತಳದ ಸಾಲಿನ ಕೋಂಟೆಯನು ಕಂ
ಡಲಘುಭುಜಬಲ ನೃಪತಿ ಹೊಕ್ಕ ವಿದರ್ಭಪಟ್ಟಣವ ೨೨

ಅರಮನೆಯ ಬಾಗಿಲಿಗೆ ಬರಲಿ
ತ್ತರದ ವೇದಿಕೆಗಳಲಿ ಪಟುಭಟ
ರುರುತರದ ಕೈದುಗಳ ಕಾಹಿನ ದಾರವಟ್ಟದಲಿ
ಇರಲು ಕಂಡನು ತರುಣಿಯರು ಸಂ
ಚರಿಸುತಿಹ ಸಡಗರವ ನಳಭೂ
ವರನದೃಶ್ಯದರೂಪಿನಿಂದೊಳಹೊಕ್ಕನರಮನೆಯ ೨೩

ಆಗಲಾ ದಮಯಂತಿ ಚಿತ್ರದ
ಬಾಗಿಲುಪ್ಪರಿಗೆಯಲಿ ರತ್ನದ
ತೂಗು ಮಂಚದ ಹಾಸಿನಲಿ ಕುಳ್ಳಿರಲು ಕೆಳದಿಯರು
ಆ ಗರುವೆಯೋಲಗದೊಳಿರೆ ಸತಿ
ಪೂಗಣೆಯನೆಸುಗೆಯಲಿ ನಳಚರಿ
ತಾಗಮದ ಕಥೆಗೇಳುತಾಲೈಸುವಳು ಚಿತ್ತದಲಿ ೨೪

ಬಂದರಲ್ಲಿಗೆ ಸುರಪ ಕಳುಹಿದ
ಮಂದಗಮನೆಯರಖಿಳ ವಸ್ತುವ
ತಂದು ಕಾಣಿಕೆಗೊಟ್ಟು ಕೈಮುಗಿದೆರಗಿ ನಿಂದಿರಲು
ಬಂದ ಸತಿಯರ ನೋಡಿ ನೀವೆ
ಲ್ಲಿಂದ ಬಂದಿರಿ ನಿಮ್ಮ ಹದನೇ
ನೆಂದು ಬೆಸಗೊಳೆ ನಗುತ ಬಿನ್ನೈಸಿದರು ಮಾನಿನಿಗೆ ೨೫

ತಾಯೆ ಕೇಳಮರೇಂದ್ರ ನಿಮ್ಮ ನಿ
ಜಾಯತದ ಚೆಲುವಿಕೆಯ ಕೇಳಿದು
ಕಾಯಜನ ಶರಹತಿಗೆ ನೊಂದನು ಕಳುಹಿದನು ನಿಮಗೆ
ಆಯತದ ಭೂಷಣಗಳನು ಸುರ
ರಾಯನಿಗೆ ಸತಿಯಾಗು ಮರ್ತ್ಯದ
ರಾಯರಸ್ಥಿರದವರ ನಚ್ಚದಿರೆಂದರಾ ಸತಿಗೆ ೨೬

ಪದವಿಯಾವುದು ಲೋಕದಲಿ ಸುರ
ಪದವಿಯಲ್ಲದೆ ಬೇರೆ ಮಿಕ್ಕಿನ
ಪದವಿಯುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸದರವೇ ನರಜನ್ಮದವರಿಗೆ
ಯೊದಗಲರಿಯದು ಪುಣ್ಯ ನಿನಗಿದು
ಸುದತಿ ಕರುಣಿಸು ಮಾತನೆಂದರು ನಗುತ ರಂಭೆಯರು ೨೭

ಅಲರ ಪರಿಮಳದೆಡೆಗೆ ತುಂಬಿಗ
ಳೊಲಿದು ಹೋಹಂದದಲಿ ಧರೆಯೊಳು
ಅಲರು ವಿಕಸಿತವಾಗಿ ಹೋಹುದೆ ಅಳಿಗಳಿದ್ದೆಡೆಗೆ
ಸಲೆ ತವಕದಿಂದಮರಪತಿಯೆಡೆ
ಗೊಲಿದು ನೀ ಹೋಹಂತೆ ಸುರಪತಿ
ನಲವಿನಿಂದಲಿ ನಿನ್ನ ಬಳಿಗೈದುವನು ಪುಣ್ಯವಿದು ೨೮

ಎನಲು ಕೇಳಿದಳಾ ನುಡಿಯ ಸುರ
ವನಿತೆಗೆಂದಳು ಚಿತ್ತವೆನಗೊ
ಬ್ಬನಲಿ ಸಿಲುಕಿತು ಮರಳಿಪಡೆ ಕಮಲಾಕ್ಷಗಳವಲ್ಲ
ಅನಿಮಿಷಾಧಿಪ ತನಗೆ ದೇವಾಂ
ಗನೆಯರಿರುತಿರೆ ಮನುಜಸತಿ ಪಾ
ವನವೆ ಬರಿದೆ ದುರಾಸೆ ತನಗೇಕೆಂದಳಿಂದುಮುಖಿ ೨೯

ಮರಳಿದರು ರಂಭೆಯರು ಬಳಿಕಾ
ನರನುತನು ನಳನೃಪತಿ ತಾ ಮನ
ಹರುಷದಲಿ ನಿಜರೂಪ ತಾಳ್ದನು ರಾಜತೇಜದಲಿ
ಅರಸನಿರೆ ದಮಯಂತಿ ಕಂಡ
ಚ್ಚರಿಯ ಮದನನೊ ನಳನೊ ನಳಕೂ
ಬರನೊ ಜಯಂತನೊ ಎನೆ ವಿಸ್ಮಯಗೊಂಡಳಾ ತರುಣಿ ೩೦

ಎಂದು ಪರಿತೋಷದಲಿ ನಾರೀ
ವೃಂದಸಹಿತಿದಿರೆದ್ದು ವಿನಯದಿ
ನಿಂದು ಕರಗಳ ಮುಗಿದು ಸಿಂಹಾಸನದಿ ಕುಳ್ಳಿರಿಸಿ
ತಂದು ಮುಕ್ತಾಫಲಗಳನು ನಲ
ವಿಂದ ಕಾಣಿಕೆಯಿತ್ತು ಸತಿಯರ
ಸಂದಣಿಯ ಕೆಲಕೊತ್ತಿ ನುಡಿದಳು ಮಧುರವಚನದಲಿ ೩೧

ಆರು ನೀವೆಲ್ಲಿಂದ ಬಂದಿರಿ
ಕಾರಣವಿದೇನಮ್ಮ ರಾಜ
ದ್ವಾರವನು ನೀವ್ ಹೊಕ್ಕ ಹದನೇನಿಲ್ಲಿ ಗಂಡುನೊಣ
ಸೇರಲಮ್ಮದು ನೀವಗಾಧದ
ವೀರರತಿ ಸೌಂದರ್ಯರೆನೆ ನಳ
ಭೂರಮಣ ನಸುನಗುತ ನುಡಿದನು ಸತಿಗೆ ವಿನಯದಲಿ ೩೨

ತರುಣಿ ಕೇಳಮರೇಂದ್ರನಟ್ಟಿದ
ಚರನು ತಾ ಮಿಗೆ ನಿನ್ನ ರೂಪನು
ಸುರಮುನಿಪನರುಹಿದರೆ ಕೇಳುತಲಿಂದ್ರ ವಿರಹದಲಿ
ಕರಗಿ ಮದನನ ಶರಹತಿಗೆ ಮನ
ಮರುಗಿ ಬಂದಿಹನಿಲ್ಲಿ ಆತಂ
ಗರಸಿಯಾಗೆನೆ ಕೇಳಿ ಮೊಗದಿರುಹಿದಳು ದಮಯಂತಿ ೩೩

ಬಲ್ಲವರು ನೀವಧಿಕರೆಮ್ಮೊಳು
ಸಲ್ಲದೀ ನುಡಿಯೇತಕಿದು ಶಚಿ
ವಲ್ಲಭನ ಮಾತೇನು ಸಾಕಂತಿರಲಿಯೆನಗಿನ್ನು
ವಲ್ಲಭನು ನಳನೃಪತಿಯಲ್ಲದೆ
ನಲ್ಲನುಂಟೇ ನೀವು ಸುರಚರ
ರಲ್ಲ ನಿಮ್ಮಭಿಮಾನವೇನೆಂದಳು ಸರೋಜಮುಖಿ ೩೪

ದೂತರಲಿ ಕುಲಗೋತ್ರಗಳ ನೀ
ನೇತಕರಸುವೆ ತರುಣಿಯಿಂದ್ರನು
ಖ್ಯಾತಪುರುಷನು ಬಯಸಿದದು ಕೃತಪುಣ್ಯ ನಿನಗಿನ್ನು
ಭೂತಳದ ನರರಧಿಕರೇ ಸಂ
ಪ್ರೀತಿಯೇಕವರಲ್ಲಿ ಬಿಡು ಪುರು
ಹೂತನನು ಕೈವಿಡಿದು ನೀ ಸುಖಿಯಾಗು ನಡೆಯೆಂದ ೩೫

ಇಳೆಯ ಮರ್ತ್ಯರು ನಾಕನಿಳಯರಿ
ಗಳವೆಯಂತರವಲ್ಲ ನುಡಿಯಲು
ಕುಲಗಿರಿಗೆ ನೊರಜಂತರವೆ ನೀ ನೋಡು ಚಿತ್ತದಲಿ
ನಳನೃಪನ ಬಯಸುವಡೆ ತಾ ನಿನ
ಗೊಲಿವನೇ ಧಾತ್ರೀಶರೊಳಗ
ಗ್ಗಳನೆ ಸಾಕೆಂದೆನಲು ಕನಲಿದು ನುಡಿದಳಾ ತರುಣಿ ೩೬

ಮಾನವಾಧೀಶ್ವರರೊಳಗೆ ಸ
ನ್ಮಾನವುಳ್ಳವ ಸತ್ಯಸಂಧ ನಿ
ಧಾನಿ ಹಿಮಕರವಂಶಪಾವನ ಸಾರ್ವಭೌಮನಲಾ
ಆ ನರೇಂದ್ರಗೆ ಸರಿಯೆ ಮನು ಮುನಿ
ದಾನವಾಮರರಿನ್ನು ನಿಮಗೀ
ಹೀನವೃತ್ತಿಯ ಮಾತದೇಕೆಂದಳು ಸರೋಜಮುಖಿ ೩೭

ನಿಷಧಪತಿಯೇ ಪತಿಯೆನುತ ಭಾ
ವಿಸಿದೆನಾತನ ಕರುಣವೆನ್ನಲಿ
ಪಸರಿಸಿದಡದು ಲೇಸು ಲೇಸಲ್ಲದಡೆ ನಳನೃಪಗೆ
ಅಸುವ ತೆರುವೆನು ಎನಗೆ ಫಲಸಿ
ದ್ಧಿ ಸಲಿದೇಸಂಕಲ್ಪವೆಂದಾ
ಶಶಿವದನೆ ಕಂಬನಿಯ ಮಿಡಿದಳು ನಖದ ಕೊನೆಗಳಲಿ ೩೮

ಕರಗಿತಂತಃಕರಣ ನೃಪತಿಗೆ
ಸರಸಿಜಾಕ್ಷಿಯ ದೃಢವ ಕಂಡನು
ಕರುಣಲತೆ ಕುಡಿದೋರಿತಾಕ್ಷಣ ನುಡಿದನಾ ಸತಿಗೆ
ಸರಸಿಜಾನನೆ ಕೇಳು ತಾನೇ
ಧರಣಿಪತಿ ನಳನೆನಲು ಲಜ್ಜಿಸಿ
ಶಿರವ ನಸುಬಾಗಿಸುತಲವಳಿಂತೆಂದಳಾ ನೃಪಗೆ ೩೯

ನಾಕನಿಳಯರು ಕುಟಿಲವಿದ್ಯರ
ನೇಕವಾಯಾವಿದರು ಇಳೆಯೊಳು
ಪ್ರಾಕೃತರು ನಾವ್ ನಿಮ್ಮ ನಂಬುವ ಪರಿಯದೆಂತೆನಗೆ
ಸಾಕು ಮನ ನಂಬುವರೆ ಹೃದಯದ
ಜೋಕೆಯಲಿ ಕುರುಹೆನಗೆ ತೋರಿನ
ಲಾ ಕಮಲಲೋಚನೆಗೆ ನುಡಿಸಿದನು ನೃಪ ನಿದರ್ಶನವ ೪೦

ವನಜಮುಖಿ ನಿನ್ನಂತರಂಗದ
ಮನವ ಕಾಣುವ ಬಗೆಯೊಳಾನಿಂ
ದಿನಲಿ ಅನಿಮಿಷನೆಂದು ಪೇಳಿದೆನಿದಕೆ ತಪ್ಪೇನು
ಮನದ ಸಂಶಯವೇಕೆ ಹಂಸೆಯು
ನಿನಗೆ ಕಳುಹಿದೆ ರಾಯಭಾರದಿ
ವನಿತೆ ನೀನಿದ ತಿಳಿದು ನಂಬುವುದುಳಿದು ಸಂಶಯವ ೪೧

ನಳನೆನಲು ತನು ಪುಳಕಜಲದಲಿ
ಮುಳುಗಿ ಹೊಂಪುಳಿಯೋಗಿ ತನ್ನಯ
ಕೆಳದಿಯರ ಮರೆಗೊಂಡು ನೃಪಸುತೆ ಹೃದಯಭೀತಿಯಲಿ
ತೊಲಗಿದಳು ನೃಪನಿತ್ತ ಪುರವನು
ಕಳೆದು ಬಂದನು ಮನದ ವಿರಹದಿ
ಬಳಲುತಿಹ ದೇವೇಂದ್ರನಿದ್ದೆಡೆಗಾಗಿ ವಹಿಲದಲಿ ೪೨

ಬಂದು ಭಯಭಕ್ತಿಯಲಿ ನಳನೃಪ
ನಿಂದ್ರ ಮಾರುತ ಯಮ ವರುಣರಿಗೆ
ವಂದಿಸುತೆ ದಮಯಂತಿ ಹೇಳಿದ ಮಾತ ವಿವರಿಸಲು
ಒಂದು ನಿನ್ನಲಿ ಕಪಟವಿಲ್ಲರ
ವಿಂದವದನೆಯರಿಂದ ಕೇಳಿದೆ
ವೆಂದು ಸಂತೈಸಿದರು ಭಯಗೊಂಡಿಹ ನೃಪಾಲಕನ ೪೩

ನಳಿನಮುಖಿಯರ ಕಪಟಚಿತ್ತವ
ತಿಳಿಯಲಾರಿಗೆ ಸಾಧ್ಯ ಕೇಳೈ
ನಳನೃಪತಿ ನಮಗಾಗಿ ಬಳಲಿದೆಯೆನುತಲುಪಚರಿಸಿ
ಒಲಿದು ಭೂಷಣವಿತ್ತು ಕಳುಹಿದ
ರಿಳೆಯ ವಲ್ಲಭನನು ತಾವ್ ತ
ಮ್ಮೊಳಗೆ ಆಲೋಚಿಸಿದರಾ ಯಮಯಿಂದ್ರಮಾರುತರು ೪೪

ಲಲನೆಯೊಲಿವುದಕಿನ್ನು ಹದನಿದು
ಹಲವು ಮಾತೇನೆಂದು ನಾಲ್ವರು
ನಳನ ರೂಪನು ತಾಳ್ದರಿತ್ತಲು ಧರಣಿವಲ್ಲಭರು
ನಲಿದು ಬರುತಿರೆ ಸ್ವರ್ಗ ಮರ್ತ್ಯ
ವಳಿಯ ಜನ ಸುರ ಸಿದ್ಧ ಕಿನ್ನರ
ರೊಲಿದು ಗುಹ್ಯಕ ಗರುಡ ಗಂಧರ್ವಾದಿ ಸುರರಲ್ಲಿ ೪೫

ನೆರೆದುದಗಣಿತದರಸುಗಳು ಕರಿ
ತುರಗ ರಥ ಪಾಯ್ದಳದ ಸಂದಣಿ
ಮೊರೆವ ಶಂಖ ಮೃದಂಗ ತಂಬಟೆ ಭೇರಿ ನಿಸ್ಸಾಳ
ಉರುಬಿತಲ್ಲಿ ವಿದರ್ಭಪುರಪತಿ
ಧರಿಸಲಾಪನೆ ಹಾ ಮಹಾದೇ
ವರಸ ಬಣ್ಣಿಸಲರಿಯೆ ನೆರೆದ ಮಹಾಮಹೀಶ್ವರರ ೪೬

ಅವರವರ ಕರೆಕರೆದು ವಿನಯದೊ
ಳವರವರ ಮರಿಯಾದೆ ಮೇರೆಯೊ
ಳವರವರ ಸತ್ಕರಿಸಿ ಕುಳ್ಳಿರಿಸಿದನು ಭೀಮನೃಪ
ಅವರವರಿಗುಚಿತೋಪಚಾರದೊ
ಳವರವರ ಮನ್ನಿಸುತಲಿರ್ದನು
ಭುವನಪತಿಗಳನೇಕರನು ಸಭೆಯೊಳಗೆ ಕೇಳೆಂದ ೪೭

ಇತ್ತಲಾ ದಮಯಂತಿಗೆಣ್ಣೆಯ
ನೊತ್ತಿದರು ಶೋಭಾನಗಳ ಪಾ
ಡುತ್ತ ಗೆಲಿದರು ತಿರುಗ ಮಿಗೆ ವಿವಿಧೋಪಚಾರದಲಿ
ಉತ್ತಮಾಂಗನೆಗಳವಡಿಸಿ ನಲಿ
ಯುತ್ತ ಸತಿಯರು ಮಜ್ಜನದ ಮನೆ
ಗತ್ಯಧಿಕಹರುಷದಲಿ ದಮಯಂತಿಯನು ಕರೆದೊಯ್ದು ೪೮

ಬೆರಸಿದರು ಪನ್ನೀರ ಹೊಂಗೊ
ಪ್ಪರಿಗೆಯಲಿ ವೊಗೆ ಮೊಗೆದು ನಾರಿಯ
ರೆರೆದರಂಗನೆಗಮಳ ಚಂದನ ಗಂಧ ಪರಿಮಳವ
ತರುಣಿಯರು ಲೇಪಿಸಿದರರಸಿಗೆ
ವರದುಕುಲಾಭರಣಗಳ ಶೃಂ
ಗರಿಸಿದರು ದಮಯಂತಿಯೊಪ್ಪಿದಳಧಿಕ ತೇಜದಲಿ ೪೯

ಮಡದಿಯರು ಬಳಸಿದರು ಸುತ್ತಲು
ಹಡಪ ಚಾಮರ ಗಿಂಡಿ ಯೊಳಿಗ
ವೊಡನಿರಲು ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ
ಎಡಬಲದೊಳಿಹ ಕಂಚುಕಿಗಳು
ಗ್ಗಡದಿ ಪಾಯವಧಾರೆನಲು ಮುಂ
ಗುಡಿಯ ಸಖಿಯರ ಗಡಣದಲಿ ನಡೆತಂದಳಿಂದುಮುಖಿ ೫೦

ಕುಡಿತೆಗಂಗಳ ಸಿರಿಮುಡಿಯ ಬಡ
ನಡುವ ಸೆಳೆವತಿ ಬೆಡಗಿನಲಿ ಹೊಂ
ಗೊಡವೊಲೆಯ ವೈಯಾರದುಡುಗೆಯ ನಿರಿಯ ಸಡಗರದ
ತೊಡರ ಝಣಝಣರವದ ಪೆಲ್ಲಡಿ
ಯಿಡುವ ಗಮನದ ಭರದಿ ಕಿರುಬೆಮ
ರಿಡುತ ಬಂದಳು ಸಖಿಯರೊಡನೆ ವಿವಾಹ ಮಂಟಪಕೆ ೫೧



ಮಾಯವಿದು ತಾನರಿಯೆನಿವರ. ನಿಜಾಯತವ

ಅವನಿಪತಿ ನಿಜಕುವರಿಗೆಂದನು
ವಿವಿಧ ರತುನದ ಮುಕುಟವರ್ಧನ
ಭುವನಪತಿಗಳನೇಕರಿದೆಲಾ ಸಿಂಹಪೀಠದಲಿ
ಯುವತಿ ನೋಡಿತ್ತರೆದೊಳಿಹ ನೃಪ
ನಿವಹದಲಿ ನೀ ಹಾಯ್ಕು ಮನವೊಲಿ
ದವರ ಕೊರಳಲಿ ಎನುತ ಕೊಟ್ಟನು ಪುಷ್ಪಮಾಲಿಕೆಯ ೫೨

ಬಂದಳಾ ದಮಯಂತಿ ನೃಪಸಭೆ
ಗಂದು ಹೊಕ್ಕಳು ಕೆಳದಿಯರು ಮುದ
ದಿಂದ ತೋರಿದರಲ್ಲಿ ಇವರಿವರೆಂದು ವಿವರಿಸುತ
ಮುಂದೆ ಬರೆ ಕೈಕಂಬಿಯರು ಬಲು
ಸಂದಣಿಯ ಕೆಲಕೊತ್ತಿ ಸಲು ಅರ
ವಿಂದಮುಖಿ ನೋಡಿದಳು ಲಜ್ಜಾಭರದೊಳವನಿಪರ ೫೩

ಮಾಳವಾಧಿಪನೀತ ಮಗಧನೃ
ಪಾಲನೀತನು ಮತ್ಸ್ಯ ಕುರುನೇ
ಪಾಳನೀತನು ಕೋಸಲಾನ್ವಯನೀತ ಬರ್ಬರನು
ಚೋಳನೀತನು ಸಿಂಧುರಾಜ ಸು
ಶೀಲನೀತ ಕಳಿಂಗ ಕುಂತಳ
ಪಾಲಕನ ನೋಡಿತ್ತಲಮರೇಶ್ವರನ ಓಲಗದ ೫೪

ಬಾಯ ಬಿಂಕದ ಸವಿನುಡಿಯನಾ
ರಾಯರಾಡಿದರಲ್ಲಿ ಕಮಲದಳಾ
ಳಾಯತಾಂಬಕಿ ನಳನ ರೂಪಿನ ನಾಲ್ವರಿರೆ ಕಂಡು
ಮಾಯವಿದು ತಾನರಿಯೆನಿವರ ನಿ
ಜಾಯತವನೆಂದೆನುತ ಮುರಿದಾ
ವಾಯುವೇಗದಿ ಬಂದು ಹೊಕ್ಕಳು ತನ್ನ ಮಂದಿರವ ೫೫

ಕಂಡುಪೇಕ್ಷಿಸಿ ಬಂದಳಂಗನೆ
ಮಂಡಲಾಧಿಪರೆಲ್ಲರನು ಆದ
ಕಂಡು ಭೀಮನೃಪಾಲ ತನುಜೆಯ ಬಳಿಗೆ ನಡೆತಂದು
ಅಂಡಲೆದು ಬೆಸಗೊಂಡಡಂದಾ
ಖಂಡಲನ ಮಾಯಗಳ ವಿವರಿಸೆ
ಅಂದು ಭಯಭಕ್ತಿಯಲಿ ನೃಪ ಚಿಂತಿಸಿದ ಭಾರತಿಯ ೫೬

ವಾಣಿ ನೀರಜಪಾಣಿ ಬ್ರಹ್ಮನ
ರಾಣಿ ಪನ್ನಗವೇಣಿ ಸುಕೃತ
ಶ್ರೇಣಿ ಸುರನಿಕುರಂಬ ವಂದಿತೆ ಸತ್ಯಸಂಚಾರಿ
ಜಾಣೆ ಸ್ತ್ರೀಕುಲರನ್ನೆ ವರಗೀ
ರ್ವಾಣಿ ರಕ್ಷಿಸು ರಕ್ಷಿಸೆಂದಾ
ಕ್ಷೋಣಿಪತಿ ಕೈಮುಗಿದು ಬೇಡಿದನಾ ಸರಸ್ವತಿಯ ೫೭

ನೆನೆಯಲಾಕ್ಷಣ ಬಂದಳಲ್ಲಿಗೆ
ವನಜನಾಭನ ಸೊಸೆ ಜಗತ್ಪಾ
ವನೆ ಸುರಾರ್ಚಿತೆ ದೇವಿ ಭಕ್ತಾಶ್ರಿತಜನಾಧಾರೆ
ಜನಪ ನೀನಿಂದಿನಲಿ ನಮ್ಮನು
ನೆನೆದ ಹದನೇನೆನಲು ಪದಯುಗ
ವನಜಕಾನತನಾಗಿ ಬಿನ್ನೈಸಿದನು ಭಾರತಿಗೆ ೫೮

ನಿಗಮನುತೆ ಗೀರ್ವಾಣಿ ರಕ್ಷಿಸು
ಮುಗುದರನು ಕರುಣದಲಿ ನೋಡುತ
ಅಗಣಿತದಿ ಅರಸುಗಳು ನೆರೆದಿರೆ ತಿಳಿಯಲರಿದೆಮಗೆ
ಮಗಳ ಮನ ವಿಗಡಿಸಿತು ನಾಲ್ವರು
ಬೆಗಡುಗೊಳಿಸಿದರೆನಲು ಭಾರತಿ
ನಗುತ ನುಡಿದಳು ಕರೆದು ದಮಯಂತಿಯನು ಕರುಣದಲಿ ೫೯

ದೇವಮಾಯೆಯಿದೀಗ ಕೇಳೆಲೆ
ದೇವಿ ಇಂದ್ರನ ಭಜಿಸೆನಲು ಸಂ
ಭಾವನೀಯರ ಸಭೆಗೆ ಬಂದೆರಗಿದಳು ಭಕ್ತಿಯಲಿ
ದೇವಕುಲಸಂಭವರು ರಕ್ಷಿಸಿ
ನೀವು ಮಗಳೆಂದೆನ್ನ ಭಾವಿಸಿ
ಪಾವನರು ತರಳೆಯನು ಪತಿಕರಿಸೆಂದಳಿಂದುಮುಖಿ ೬೦

ಗಳಿಲನಾ ಪ್ರಚ್ಛನ್ನವೇಷವ
ಕಳೆದು ಯಮ ಪವಮಾನ ವರುಣರು
ಬಳಿಕ ಸುರಪತಿ ಮೆಚ್ಚಿ ದಮಯಂತಿಯನು ಕೊಂಡಾಡಿ
ನಳನೃಪನ ಕರಸಿದರು ಹೂವಿನ
ಮಳೆಯ ಕರೆದಳು ದೇವದುಂದುಭಿ
ಮೊಳಗೆ ಅರಸನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ ೬೧

ಆ ಸಮಯದಲಿ ಭೀಮನೃಪ ಸಂ
ತೋಷದಲಿ ಕರಸಿದನು ಮುನಿಗಳ
ಸೇಸೆದಳೆದರು ಸತಿಪತಿಯರಿಗೆ ಹರಿಸಿ ಅಕ್ಷತೆಯ
ಭೂಸುರರ ಮತದಿಂದಲಾ ಧರ
ಣೀಶ ಧಾರೆಯನೆರೆದನಲ್ಲಿ ವಿ
ಲಾಸದಲಿ ಪಾಡಿದರು ಮುತ್ತೈದೆಯರು ಶೋಭನವ ೬೨

ಮಂಗಳಾರತಿಯೆತ್ತಿದರು ದೇ
ವಾಂಗನೆಯರವನಿಪಗೆ ಧರೆಯೊಳು
ತುಂಗವಿಕ್ರಮನಾಗೆನುತ ಹರಸಿದರು ಮುನಿವರರು
ವಿಂಗಡದಲಿಂದ್ರನು ಮನೋಹರ
ದಂಗವಸ್ತ್ರಾಭರಣವಿತ್ತು ಸು
ರಾಂಗನೆಯರೊಡಗೂಡಿ ಕಳುಹಿಸಿಕೊಂಡನುಚಿತದಲಿ ೬೩

ಅರಸ ಕೇಳೈ ತನ್ನ ಬಾಂಧವ
ಧರಣಿಪರ ಮಂತ್ರಿಗಳ ಮುನಿಮು
ಖ್ಯರ ಸುಗಾಯಕ ಪಂಡಿತರ ಭೂಸುರರ ಯಾಚಕರ
ಹರುಷ ಮಿಗಿಲಾದರಿಸಿ ಕರಿರಥ
ತುರಗ ವಸ್ತ್ರಾಭರಣದಿಂದುಪ
ಚರಿಸಿ ಭೀಮನೃಪಾಲನವರವರುಗಳ ಕಳುಹಿದನು ೬೪

ಅಳಿಯನನು ಮನ್ನಿಸಿದ ಮಗಳಿಗೆ
ಹೊಳೆವ ಮಣಿಭೂಷಣದ ಪೆಟ್ಟಿಗೆ
ಗಳನು ಗಜ ರಥ ತುರಗ ಹೇಮದ ಮಂಚ ಲಲನೆಯರ
ಬಳುವಳಿಯನಿತ್ತವನಿಪತಿ ನಿಜ
ಬಲಸಹಿತ ಮಾಡಿದನು ಪಯಣವ
ನುಲಿವ ಮಂಗಳವಾದ್ಯ ಸಂದಣಿಯಿಂದ ರಭಸದಲಿ ೬೫

ವರಮುಹೂರ್ತದೊಳೇರಿದನು ಮಣಿ
ಕಿರಣದುನ್ನತ ರಥವ ನಳಭೂ
ವರನು ನಿಜಸತಿಸಹಿತ ಹೊಕ್ಕನು ನಿಷಧಪಟ್ಟಣವ
ಮೊರೆವ ಶಂಖ ಮೃದಂಗ ಭೇರಿಗ
ಳಿರದೆ ಮೊಳಗಲು ಸಕಲದಳ ಮೋ
ಹರಿಸಲಾ ನಿಸ್ಸಾಳತತಿ ಪುರಜನದ ಜಯರವದಿ ೬೬

ಬಂದುಹೊಕ್ಕನು ಅರಮನೆಯ ಸುರ
ವೃಂದ ನಲಿಯಲು ಸಕಲಜನಸಹಿ
ತಂದು ಸಿಂಹಾಸನವನೇರಿದನು ಸಚಿವರೊಡಗೂಡಿ
ಇಂದುಮುಖಿ ದಮಯಂತಿಯೊಡನಾ
ನಂದದಲಿ ಸಾಮ್ರಾಜ್ಯವಾಳಿದ
ನಂದು ವರನಗರಾಧಿಪತಿ ಚೆನ್ನಿಗನ ಕರುಣದಲಿ ೬೭

## ೪. ಅರಸ ಸೋತನು ವಿಧಿಯ ಘಟನೆಯಲಿ

ಕೇಳಿದೈ ರಾಜೇಂದ್ರ ಧರ್ಮನೃ
ಪಾಲ ನೈಷಧನತುಳ ಸಂಪದ
ದೇಳಿಗೆಯನೇನೆಂಬೆ ಸಪ್ತದ್ವೀಪದವನಿಪರ
ಮೌಳಿಗಳು ನೃಪನಂಘ್ರಿಕಮಲವ
ನೋಲಗಿಸುತಿಹುದವನ ಕೀರ್ತಿ ಥ
ಡಾಳಿಸಿತು ತ್ರೈಜಗವನವನೀಪಾಲ ಕೇಳೆಂದ ೧

ಇಂತೆಸೆವ ಸಂಪತ್ತಿನಲಿ ಭೂ
ಕಾಂತ ನಳ ಚಕ್ರೇಶನಲಿ ದಮ
ಯಂತಿ ಪಡೆದಳು ಪುತ್ರಕನ ಮಿಗೆ ಪುತ್ರಿಯೊರ್ವಳನು
ಸಂತಸದಲಿರಲಾ ವಿದರ್ಭಪು
ರಾಂತರದಿ ನೆರೆದಖಿಳಜನ ಭೂ
ಕಾಂತರೊಡನೈತಂದು ಹೊಕ್ಕರು ತಮ್ಮ ನಗರಿಗಳ ೨

ಸುರಪನಾಗ ವಿದರ್ಭಪುರದಿಂ
ತೆರಳುತಮರಾವತಿಗೆ ದಿಕ್ಪಾ
ಲರು ಸಹಿತ ನಲವಿಂದೆ ದಮಯಂತಿಯ ಚರಿತ್ರೆಯನು
ಹರುಷ ಮಿಗೆ ಕೊಂಡಾಡುತೈತರು
ತಿರಲು ಮಾರ್ಗದಿ ಕಂಡರಾ ಕಲಿ
ಪುರುಷನನು ಕುಟಿಲಾತ್ಮಕನ ನಿಸ್ಸಾರ ಹೃದಯನನು ೩

ಕುರುಳು ಜುಂಜುರು ತಲೆಯ ತಗ್ಗಿದ
ಕೊರಳ ಕೆಂಗರಿಗಣ್ಣ ಮೋರೆಯ
ಹರಕು ಗಡ್ಡದ ಕೆಂಚುಮೀಸೆಯ ಮಲಿನವಸನದಲಿ
ನೆರೆದ ವೀರ ಕರಾಳ ಭಟರಿ
ತ್ತೆರದೊಳುಕ್ಕಿನ ತೇರಿನಲಿ ಕಲಿ
ಪುರುಷ ಕಾಣಿಸಿಕೊಂಡನಮರೇಶ್ವರನ ನಸುನಗುತ ೪

ಆರು ನೀ ಜಂಭಾರಿಯೋ ಇವ
ರಾರು ಯಮ ವರುಣಾದ್ಯರೋ ಸಂ
ಚಾರವೆತ್ತಲು ನಿಮಗೆ ಎನಲಮರೇಂದ್ರ ನಸುನಗುತ
ತೋರಹತ್ತದೊಳೆಂದ ನಳನಿಗೆ
ನಾರಿ ದಮಯಂತಿಯನು ಮದುವೆಯ
ಧಾರೆಯೆರೆಯಿಸಿ ಬಂದೆವೆನೆ ಖತಿಗೊಂಡ ಕಲಿರಾಯ ೫

ಅನಿಮಿಷರು ನೀವಧಿಕಬಲರಾ
ವನಿತೆಯನು ಕೈಕೊಳ್ಳಲಾರದೆ
ಜನಪ ನಳನೃಪಗಿತ್ತು ಬಂದಿರಿ ಶಿವ ಮಹಾದೇವ
ಎನಗೆ ನೇಮಿಸಿ ಕಳುಹಿ ನಿಮ್ಮಯ
ಮನದ ಬಯಕೆಯ ಸಲಿಸುವೆನು ಕೇ
ಳೆನಲು ಸುರಪತಿ ನಸುನಗುತ ಕಲಿಪುರುಷಗಿಂತೆಂದ ೬

ಲೇಸನಾಡಿದೆ ಕಲಿಪುರುಷ ನಿನ
ಗೀಸು ಪೌರುಷವುಂಟೆ ನಮಗಿ
ನ್ನಾಸರೋರುಹಗಂಧಿಯಲಿ ಮನವಿಲ್ಲ ನಳನೃಪತಿ
ಈ ಸಮಸ್ತ ನೃಪಾಲರಲಿ ಸ
ದ್ಭೂಷಣನು ಶೌರ್ಯೋನ್ನತನು ಕಮ
ಲಾಸನಂಗಳವಲ್ಲ ನಿನ್ನಲಿ ಹರಿವುದೇನೆಂದ ೭

ಎನಲು ಖತಿಗೊಂಡೆಂದ ಕೇಳಲೆ
ಅವಿಷಾಧಿಪ ಎನ್ನನರಿಯೆಯೆ
ದಿನಿಪನಿದಿರಲಿ ತಮದ ಹಾವಳಿಯೇ ಮಹಾದೇವ
ಎನಗೆ ಸರಿಯಾರಿನ್ನು ತಹೆನಾ
ವನಿತೆಯನು ಕುಹಕದಲಿ ನಳಭೂ
ವರನ ಕೆಡಿಸಿಯೆ ಕಾನನಕೆ ಕಳುಹುವೆನು ನೋಡೆಂದ ೮

ನಿಮಗೆ ಪೌರುಷವಿಲ್ಲ ನಳನಾ
ಕ್ರಮಿಸಿಕೊಂಡನು ಸತಿಯು ಪುರುಷಾ
ಧಮರು ನೀವಿನ್ನೇಕೆ ಕೊಡಿ ವಟುವೇಷವನು ತನಗೆ
ಕಮಲಮುಖಿಯನು ನಿಮಗೆ ಪಟ್ಟದ
ರಮಣಿಯನು ಮಾಡುವೆನು ಎಂದು
ಭ್ರಮಿಸಿ ನುಡಿದನು ಗರ್ವದಲಿ ಕಲಿಪುರುಷ ಸುರಪತಿಗೆ ೯

ಕೇಳಿ ಕಿವಿ ಮುಚ್ಚಿದನು ಶಿವ ಶಿವ
ಭಾಳಲೋಚನ ಎನುತ ಸಭೆಯಲಿ
ಖೂಳನಾಡಿದ ನುಡಿಗೆ ಸುರಪತಿ ಕನಲಿ ಖತಿಗೊಂಡು
ಬೀಳುಮಾತುಗಳೇಕೆ ನಿನಗಿದು
ನೀಲಮೇಘಶ್ಯಾಮನಿಗೆ ಸಮ
ಪಾಳಿಯೆನಿಸುವ ನಳನೃಪಗೆ ಎರಡೆಣಿಸಬೇಡೆಂದ ೧೦

ಹಿಡಿಯೆ ಮುನ್ನವೆ ಹಿಡಿದ ಬಳಿಕದ
ಬಿಡೆನು ಮತವೆನ್ನಲ್ಲಿ ನಿಷಧನ
ನಡವಿಗಟ್ಟದೆ ಮಾಣೆ ಮಾತಾಡದಿರಿ ನೀವೆನಲು
ಮಿಡುಕಿದರು ಕಡುಪಾಪಿಯಿವ ತಾ
ಬಿಡನೆನುತ ಮನನೊಂದು ಸುರಪತಿ
ತಡೆಯದೈದಿದನಮರಪುರಿಗತ್ಯಧಿಕ ವಹಿಲದಲಿ ೧೧

ಇಳಿದನವನೀತಳಕೆ ಖಳಕುಲ
ತಿಳಕನೆಂದನು ತನ್ನ ಭಟರಿಗೆ
ನಳನೃಪನ ಹೊದ್ದುವಡಸಾಧ್ಯವಿದೆನೆಗೆ ಆತನಲಿ
ಒಲಿದಿಹಳು ಜಯವಧು ಸುಶೀಲತೆ
ನೆಲಸಿಹುದು ದುಶ್ಶೀಲ ದುರ್ಗುಣ
ಬಳಸದರಸನನೆನುತ ಹೊಕ್ಕನು ನಿಷಧಪಟ್ಟಣವ ೧೨

ಇಲ್ಲವೆನ್ನರು ಬೇಡಿದರೆ ಬಿಡ
ರಲ್ಲಿ ಪಾಡಿನ ಪಂಥಗಳ ನುಡಿ
ಯಲ್ಲಿಯನೃತವನಾಡರಗ್ಗದ ಸತ್ಯನಿರ್ಮಲರು
ಎಲ್ಲರಲಿ ಅತಿಹಿತರು ಕ್ರೋಧಗ
ಳಿಲ್ಲ ಸದ್ಧರ್ಮ ಸ್ವರೂಪಿಗ
ಳಲ್ಲಿ ಮೆರೆದರು ಸುಜನರಾ ನಳನೃಪನ ರಾಜ್ಯದಲಿ ೧೩

ಅಲ್ಲಿ ತಿರುಗಿದ ಬೀದಿ ಬೀದಿಗ
ಳಲ್ಲಿ ಪುರಜನವರಿಯದಂತಿರ
ಲಲ್ಲಿ ಮಾಯಾ ರೂಪಿನಿಂದ ಪಿಶಾಚನಂದದಲಿ
ಸಲ್ಲಲಿತ ಶಿವವಿಷ್ಣು ಭಕ್ತರಿ
ಗೆಲ್ಲ ನಯವಿದರಾದ ಸುಜನರ
ನ್ನೆಲ್ಲ ಕಾಣುತ ಬಂದನರಮನೆಗಾಗಿ ಕಲಿರಾಯ ೧೪

ಮುರಿದು ನೋಡಿದನಲ್ಲಿ ತೆಂಗಿನ
ಮರಗಳುನ್ನತ ವಿವಿಧ ವೃಕ್ಷದ
ಹೊರೆಗೆಯಲಿ ಕಣ್ಗೆಸೆವ ನಗರೋದ್ಯಾನ ವೀಧಿಯಲಿ
ಉರುತರದೊಳಿಹ ಕರ್ಣಪತ್ರದ
ತರುವಿನಗ್ರದೊಳಿರ್ದ ಬಹುದಿನ
ವರಸ ಕೇಳ್ ಕಲಿಪುರುಷನಿತ್ತಲು ರಾಜಭವನದಲಿ ೧೫

ಒಂದು ದುರ್ದಿವಸದಲಿ ನೃಪನಿಗೆ
ಬಂದುದಲ್ಪಾಚಮನ ಕಾಲವು
ಅಂದು ಶುದ್ಧಾ ಚಮನವಿಲ್ಲದೆ ಮರೆದು ನೀರ್ಗುಡಿಯೆ
ಇಂದು ತನಗಿದೆ ಸಮಯವೆಂದಾ
ನಂದದಲಿ ಕಲಿಪುರುಷ ರಾಯನ
ಸಂಧಿಸಿದ ವಿಧಿವಶವ ತಪ್ಪಿಸಲಾರ ಹವಣೆಂದ ೧೬

ಕಪಟ ಭೂಸುರ ವೇಷದಲಿ ನಿ
ಷ್ಕಪಟ ನಳಭೂಪನನು ಕೆಡಿಸುವ
ಉಪಮೆಯನು ತಾ ನೆಗಳ್ದು ಬಂದನು ಪುಷ್ಕರನ ಹೊರೆಗೆ
ನಿಪುಣನೆಂದನು ನಿನಗೆ ನಳಭೂ
ಮಿಪನು ಸಖನೆನೆ ಕೇಳಿ ಬಂದೆನು
ಅಪಯಶಕೆ ಹೆದರದಿರು ನಿನಗಹುದಖಿಳ ರಾಜ್ಯಪದ ೧೭

ಬಲ್ಲೆಯಾ ನೀನೆನ್ನ ಲೋಕಕೆ
ಬಲ್ಲಿದನು ತಾ ಕಲಿಪುರುಷ ನಳ
ನಲ್ಲಿ ದ್ಯೂತವನಾಡಿ ಗೆಲಿಸುವೆ ನಿನ್ನ ನೆತ್ತದಲಿ
ಒಲ್ಲೆನೆನದಿರು ಸಕಲ ರಾಜ್ಯದ
ವಲ್ಲಭನ ಮಾಡುವೆನು ನಡೆ ಹುಸಿ
ಯಲ್ಲ ನಿಷಧನ ಕಿತ್ತು ಬಿಸುಡುವೆ ನಂಬು ನೀನೆಂದ ೧೮

ನಂಬಿದನು ಲೇಸಾಗಿ ಭಾಷೆಯ
ನಿಂಬುಗೊಂಡುದು ಹೃದಯ ಪುಷ್ಕರ
ನೆಂಬ ಖಳ ಸಂತೋಷದಲಿ ಕಲಿಪುರುಷನೊಡಗೊಂಡು
ಅಂಬುಜಾಕ್ಷನ ಕಳೆಗೆ ತಾ ಪ್ರತಿ
ಬಿಂಬವೆನಿಸುವ ನಳನ ಬಳಿಗತಿ
ಸಂಭ್ರಮದೊಳೈತಂದರಿಬ್ಬರು ರಾಯನೋಲಗಕೆ ೧೯

ಮಿಸುನಿ ರತ್ನಪ್ರಭೆಗಳಲಿ ರಂ
ಜಿಸುವ ಮಂಟಪದೊಳಗೆ ರಾಜ
ಪ್ರಸರ ಸಹಿತವನೀಶನಿದ್ದನು ಸಿಂಹಪೀಠದಲಿ
ಶಶಿಮುಖಿಯರೆಡಬಲದಿ ಕೈವಾ
ರಿಸುತ ಸಿತಚಾಮರವ ಚಿಮ್ಮಲು
ನಸನಗುತ ಕೈಮುಗಿದು ಪುಷ್ಕರನೆಂದ ನಳನೃಪಗೆ ೨೦

ಅರಸ ಕೇಳೀ ವಿಪ್ರನತಿ ಭಾ
ಸುರ ಸುತೇಜದೊಳೆಸೆವ ನೆತ್ತವ
ನೆರಡ ಕಾಣಿಕೆಗೊಟ್ಟನಿದರಲಿ ಎನಗೆ ಮನವಾಯ್ತು
ಹರವು ಹಾಸಂಗಿಗಳನಾಡುವೆ
ವಿರದೆ ಸೋತವನಾವನಾಗಲಿ
ಧರೆಯನುಳಿದು ವನಾಂತರಕೆ ತೆರಳುವುದು ಸತಿಸಹಿತ ೨೧

ಧರಣಿಪತಿ ನಿನಗಿನ್ನು ಚಿತ್ತಕೆ
ಹರುಷವಾಗಿರಲಾಡು ಮನದಲಿ
ಕೊರತೆದೋರಲು ಮಾಣು ಇದು ಪಾರ್ಥಿವರ ಪಂಥ ಕಣ
ಧುರಕೆ ಬೇಂಟೆಗೆ ಜೂಜಿಗೆಡೆಯಲಿ
ಕರೆದರೋಸರಿಸುವುದು ನೀತಿಯೆ
ನಿರುತವಿದು ಚಿತ್ತೈಸು ಎಂದನು ನೃಪಗೆ ಕೈಮುಗಿದು ೨೨

ಮೇದಿನೀಪತಿ ಕೇಳು ಸಜ್ಜನ
ಸಾಧು ಬಲ್ಲನೆ ಖಳನ ಹೃದಯವ
ನಾ ದುರಾತ್ಮನ ನುಡಿಯ ಕೈಕೊಂಡಾಡಿದನು ನೃಪತಿ
ಭೇದದಲಿ ಕಲಿಪುರುಷ ಮಾಯೋ
ಪಾಧಿಯಲಿ ಪುಷ್ಕರನ ಜೂಜಿನ
ವಾದದಿಂದರಗಳಿಗೆಯಲಿ ಗೆಲಿಸಿದನು ವಸ್ತುಗಳ ೨೩



ಅರಸ ಸೋತನು ವಿಧಿಯ ಘಟನೆಯಲಿ

ಆಡಿದನು ಜೂಜಿನಲಿ ನೃಪಹೋ
ಗಾಡಿದನು ರಾಜ್ಯವನು ಕೋಶವ
ಕೇಡುಗರ ಕೈವಶವಿಸಿದುದು ದೈವಗತಿಯಿಂದ
ಬಾಡಿತರಸನ ವದನ ಸಭೆಯಲಿ
ನೋಡಿದರು ಸಜ್ಜನರು ಮರುಗಿದ
ರಾಡಲೇನದನರಸ ಸೋತನು ವಿಧಿಯ ಘಟನೆಯಲಿ ೨೪

ಅರಸನಾಪ್ತ ಪುರೋಹಿತನು ಮನ
ಹರುಷವಳಿದೆಯ್ತಂದನಂತಃ
ಪುರವ ಹೊಕ್ಕನು ರಾಜವದನೆಯ ಸಭೆಗೆ ತಾ ಬಂದು
ತರುಣಿಯರ ಮೇಳದಲಿ ನೃಪಸತಿ
ಪರಮತೇಜದಿ ರತ್ನಪೀಠದಿ
ಶರಧಿರಾಜತನೂಜೆಯಂತಿರೆ ಕಂಡು ಕೈಮುಗಿದ ೨೫

ತಾಯೆ ಬಿನ್ನಹವಿಂದು ನಿಮ್ಮಯ
ರಾಯ ಸೋತನು ಜೂಜಿನಲಿ ನಿ
ರ್ದಾಯದಲಿ ಪುಷ್ಕರನು ಗೆಲಿದನು ಸಕಲ ರಾಜ್ಯವನು
ನೋಯಲಾಗದು ಚಿತ್ತದಲಿ ಸಿರಿ
ಬೀಯವಾದುದು ಕೇಳಿ ಇನ್ನಿದ
ರಾಯತವ ನೀವ್ ಬಲ್ಲಿರೆಂದನು ವಿಪ್ರ ಕೈಮುಗಿದು ೨೬

ಕಮಲವನದಲಿ ಮಂಜುಸುರಿವಾ
ಕ್ರಮದ ಬಗೆಯಲಿ ಸತಿಯುಳಿಗೆ ಮುಖ
ಕಮಲ ಬಾಡಿತು ನುಡಿಯ ಕೇಳುತ ಮನದ ಚಿಂತೆಯಲಿ
ಕಮಲನಾಭನ ಕರುಣಕವಚವು
ಸಮೆದರಾರೇಗುವರು ಶಿವಶಿವ
ಕುಮತಿ ಪುಷ್ಕರನಿಂತು ಮುನಿದನೆ ಎನುತ ಮರುಗಿದಳು ೨೭

ವಿಮಲಮತಿ ನಳನೃಪಗೆ ರಾಜ್ಯ
ಭ್ರಮಣವಾದುದೆ ಎನುತ ಸತಿ ಭೂ
ರಮಣನೆಡೆಗೈತಂದು ನೋಡಿದಳಿನಿಯನಿಂಗಿತವ
ತಮದ ರಾಹುಗ್ರಹವು ಸೋಂಕಿದ
ದ್ಯುಮಣಿಯಂತಿರೆ ಕಂಡು ಧೈರ್ಯದಿ
ಕಮಲಮುಖಿ ಕೈಮುಗಿದು ಬಿನ್ನೈಸಿದಳು ನಿಜಪತಿಗೆ ೨೮

ಶಶಿಕುಲಾಂಬುಧಿ ಚಂದ್ರ ರಿಪುನೃಪ
ನಿಶಿತ ಭಾಸ್ಕರ ತೇಜ ನಿಮಗೀ
ವ್ಯಸನ ತೋರಿತೆ ಜೂಜಿನಲಿ ಶಿವಶಿವ ಮಹಾದೇವ
ಬಿಸರುಹಾಕ್ಷನ ಕರುಣವಿದು ಸೋ
ಲಿಸಿದನೇ ಪುಷ್ಕರನು ಇದು ವಿಧಿ
ವಶವಲಾ ತಪ್ಪೇನು ಸಾಕಿನ್ನೆಂದಳಿಂದುಮುಖಿ ೨೯

ತರುಣಿ ಕೇಳಪಜಯದ ನಾರಿಯ
ಸೆರಗ ಹಿಡಿದೆನು ರಾಜ್ಯಲಕ್ಷ್ಮಿಯು
ಪರರಿಗಿತ್ತುಳುಹಿದೆನು ದೇಹವನಿದಕೆ ಅಂಜದಿರು
ತರುಣಿ ನೀ ಕಾನನದಿ ಗಿರಿ ಗ
ಹ್ವರಗಳಲಿ ಬಿಡದೆಂತು ತೊಳಲುವೆ
ಹರಹರಾ ಎಂದೆನುತ ಸತಿಯನು ನೋಡಿ ಬಿಸುಸುಯ್ದ ೩೦

ಚಿತ್ತವಿಸು ಶಶಿಕುಲ ಶಿರೋಮಣಿ
ಹೆತ್ತವರು ಸತಿಸುತರು ಮನೆ ಮನೆ
ವಾರ್ತೆ ಬಾಂಧವ ಧರಣಿ ಧನ ಭೋಗೈಕಸಂಪದವು
ನಿತ್ಯವಲ್ಲ ಶರೀರಸುಖಗಳ
ನಿತ್ಯವೆಂಬುದನರಿಯಿರೇ ನಿಜ
ಸತ್ಯವನು ಕೈವಿಡಿದು ಸಲಹೆಂದಳು ಸರೋಜಮುಖಿ ೩೧

ಚಿಂತೆ ಬೇಡೆಂದರಸನನು ಸತಿ
ಸಂತವಿಟ್ಟಳು ನೀತಿಯಲಿ ದಮ
ಯಂತಿ ನಿಜಮಂದಿರಕೆ ಸರಿಯಲು ಕಂಡು ಪುಷ್ಕರನು
ಇಂತು ಜೂಜಲಿ ಸೋತು ತಿರುಗಿ
ನ್ನೆಂತು ರಾಜ್ಯದಿ ನಿಲುವಿರೆನೆ ಭೂ
ಕಾಂತ ನಿಜಸತಿ ಸಹಿತ ವನವಾಸಕ್ಕೆ ಅನುವಾದ ೩೨

ತಳಿತ ಮಣಿಭೂಷಣಗಳೆಲ್ಲವ
ಕಳಚಿ ಬಿಸುಟನು ಗುರುವಿನಂಘ್ರಿಗೆ
ನಳಿನಮುಖಿ ಸಹಿತೆರಗಿ ಹೊರವಂಟವನು ನಿಜಾಲಯವ
ಬಳಿಯಲೈದಿದರಖಿಳ ಪುರಜನ
ಜಲದ ಕಂಗಳ ಧಾರೆಯಲಿ ಗಾ
ವಳಿಯು ಮಸಗಿತು ಶೋಕರಸ ತುಂಬಿದುದು ಪಟ್ಟಣವ ೩೩

ಮನದಿ ಮುನ್ನವೆ ತಿಳಿದು ನೃಪಸತಿ
ತನಯರನು ರಥದೊಳಗೆ ತಂದೆಯು
ಮನೆಗೆ ಕಳುಹಿದಳಾಪ್ತರೊಡನೆ ವಿದರ್ಭಪುರವರಕೆ
ಜನಪ ಕೇಳಿತ್ತಲು ಮಹಾರೋ
ದನದಿ ಪಟ್ಟಣವೆಲ್ಲ ಮರುಗಲು
ವನಿತೆ ಪತಿಯೊಡನೈದಿದಳು ನಿಜ ಭಾವಶುದ್ಧಿಯಲಿ ೩೪

ಏನನೆಂಬೆನು ಜೀಯ ಲೋಕದ
ಮಾನಿನಿಯೆ ದಮಯಂತಿ ಸತ್ಯ
ಜ್ಞಾನಿಯಲ್ಲಾ ಸತಿಯರಿಗೆ ಗುರು ಪತಿವ್ರತಾಗುಣದಿ
ಮೌನದಲಿ ಪತಿಯಂಘ್ರಿ ಕಮಲ
ಧ್ಯಾನದಲಿ ಮನಸಂದು ಸತಿ ಘನ
ಕಾನನಕೆ ಗಮಿಸಿದಳು ವರಪುರದರಸನಾಜ್ಞೆಯಲಿ ೩೫

## ೫. ದಮಯಂತಿ ಹೊಕ್ಕಳು ಚೈದ್ಯನಗರಿಯನು

ಕೇಳು ಕುಂತೀತನಯ ನಳನೃಪ
ಬೀಳುಕೊಂಡನು ಪುರವನಲ್ಲಿಂ
ಮೇಲೆ ನಡೆದರು ಪಯಣಗತಿಯಲಿ ಹಲವು ಯೋಜನವ
ಹೇಳಲೇನದನವರವಿಧಿಯನು
ತಾಳಿಗೆಗಳೊಣಗಿದವು ಸತಿಯಳ
ಕಾಲೊಡೆದು ಸುರಿವರುಣಜಲದಲಿ ಬಟ್ಟೆ ಕೆಸರಾಯ್ತು ೧

ಎಳೆಯ ಬಾಳೆಯ ಸುಳಿಯು ಅನಲನ
ಜಳದ ಹೊಯ್ಲಲಿ ನೊಂದವೋಲುರೆ
ಬಳಲಿದಬಲೆಯ ಕಂಡು ನೃಪ ಮರುಗಿದನು ಮನದೊಳಗೆ
ಲಲಿತ ಹೇಮದ ತೂಗುಮಂಚದ
ಹೊಳೆವ ಮೆಲ್ವಾಸಿನಲಿ ಮಲಗುವ
ಲಲನೆಗೀ ವಿಧಿ ಬಂದುದೇ ಹಾ ಎನುತ ಬಿಸುಸುಯ್ದ ೨

ಮರುಗಲಿನ್ನೇಕರಸ ಬಿಡು ವಿಧಿ
ಬರೆದ ಬರಹವ ತಪ್ಪಿಸಲು ಹರಿ
ಹರ ವಿರಿಂಚಾದ್ಯರಿಗೆ ಸಾಧ್ಯವೆ ನಮ್ಮ ಪಾಡೇನು
ಹರಿವುದಾಕ್ಷಣ ತುಂಬುವುದು ಗೋ
ಚರಿಸುವುದು ಸಿರಿ ನಿತ್ಯವೇನಿದ
ನರಿಯದವನೇ ನೋಯಲೇಕೆಂದಳು ಸರೋಜಮುಖಿ ೩

ನುಡಿಯ ಕೇಳುತ ಮನದಿ ಮಿಡುಕುತ
ಪೊಡವಿಪತಿ ಸತಿಸಹಿತ ಘನತರ
ದಡವಿಯಲಿ ಬರುತಿರೆ ಜಗನ್ಮೋಹನದ ಪಕ್ಷಿಗಳು
ಪೊಡವಿಗಿಳಿಯಲು ಕಂಡಪೇಕ್ಷಿಸಿ
ಪಿಡಿವೆನೆಂದುರವಣಿಸಿ ನೃಪ
ಹೆಚ್ಚಡವ ಬೀಸಿದಡದನು ಕೊಂಡೊಯ್ದುದು ನಭಸ್ಥಳಕೆ ೪

ಮೂಗಿನಲಿ ಬೆರಳಿಟ್ಟು ಮುಕುಟವ
ತೂಗಿದನು ನಸುನಗುತ ನಿಂದಿರ
ಲಾಗ ಸೂಚಿಸಿದವು ನಿರಂತರ ರಾಜ್ಯಭೋಗವನು
ಬೇಗದಿಂದಪಹರಿಸಿಕೊಂಡವ
ರೀಗ ನಾವಿದನರಿದಿರೆಂದು ಸ
ರಾಗದಿಂದಲಿ ಮಾಯವಾದವು ಪಕ್ಷಿಯುಗಳಗಳು ೫

ಧರಣಿಪತಿ ಕೇಳ್ ನಿಷಧಪತಿ ಕಲಿ
ಪುರುಷ ಮಾಯವ ಬಲ್ಲನೇ ಮನ
ಮರುಗಿ ನಿರ್ವಾಣದಲಿ ನಿಂದಿರಲಾಗ ಸತಿ ಕಂಡು
ಹರಹರಾ ಎನುತಾಗ ಸೀರೆಯ
ಸೆರಗ ಹರಿದಿತ್ತಳು ನೃಪಾಲಗೆ
ಶಿರವ ನಸುಬಾಗಿದಳು ನಾಚಿಗೆಯಾಗಲಿಂತೆಂದ ೬

ಧರೆಯ ನೃಪರಿಗೆ ನಿಷಧಪುರಪತಿ
ಯರಮನೆಯ ಬಾಗಿಲಿನ ಸಮುಖವು
ದೊರಕಲದು ತಾ ಪುಣ್ಯವೆಂಬೀಯರಸುತನ ನಮಗೆ
ಹರೆದುದೆಲ್ಲ ಸಮಸ್ತ ರಾಜ್ಯದ
ಸಿರಿಗೆ ಬಾಹಿರನಾಗಿ ಪತ್ನಿಯ
ಸೆರಗನುಡುವಂತಾಯ್ತೆ ಹರಹರ ಎನುತ ಬಿಸುಸುಯ್ದ ೭

ಧರೆಯ ಸಂಪದದಷ್ಟ ಭೋಗವ
ಪರಿಹರಿಸಿ ನಿಜಪುತ್ರ ಮಿತ್ರರ
ತೊರೆದು ನಂಬಿದ ಸತಿಯ ಘೋರಾರಣ್ಯ ಮಧ್ಯದಲಿ
ಹಿರಿದು ಬಳಲಿಸಿ ನೋಯಿಸಿದೆ ಕೇಳ್
ತರುಣಿ ಎನ್ನವೊಲಾರು ಪಾಪಿಗ
ಳಿರದೆ ನೀ ಪೋಗಿನ್ನು ತಂದೆಯ ಮನೆಗೆ ನಡೆಯೆಂದ ೮

ಇನಿಯನಾಡಿದ ನುಡಿಗೆ ಅಂಗನೆ
ಕನಲಿ ನುಡಿದಳು ಶೋಕದಲಿ ನೀ
ನಿನಿತು ಮುನಿದಾಡುವರೆ ಸಾಕಿನ್ನಾರು ಗತಿಯೆನಗೆ
ಅನುದಿನವು ನಾ ನಿಮ್ಮ ಪದಯುಗ
ವನಜವನು ಭಜಿಸುವುದ ತೊರೆದೀ
ತನುವ ಸೈರಿಸಲಾಪೆನೇ ಹೇಳೆಂದಳಿಂದುಮುಖಿ ೯

ನೆಳಲು ತನುವಿನ ಬಳಿಯಲಲ್ಲದೆ
ಚಲಿಸುವುದೆ ತಾ ಬೇರೆ ನಿಮ್ಮಡಿ
ನಳಿನದಲಿ ಸುಖದುಃಖವಲ್ಲದೆ ಬೇರೆ ಗತಿಯುಂಟೆ
ಹಳುವವೇ ಸಾಮ್ರಾಜ್ಯ ನಿಮ್ಮಡಿ
ನೆಳಲಿನಲಿ ತಾನಿರುವೆನಲ್ಲದೆ
ನಿಳಯವೇ ನನಗಡವಿಯೆಂದೆರಗಿದಳು ಪದಯುಗಕೆ ೧೦

ಶೋಕವೇಕೆಲೆ ತರುಣಿ ಬಾರೆಂ
ದಾ ಕಮಲಲೋಚನೆಯ ತೋಳಿನೋ
ಳೌಕಿ ಬಿಗಿದಪ್ಪಿದನು ಸೆರಗಿನೊಳೊರಸಿ ಕಂಬನಿಯ
ಜೋಕೆಯಲಿ ಕುಳ್ಳಿರಿಸಿ ತೊಡೆಯೊಳ
ನೇಕ ಪ್ರೀತಿಯೊಳೆಂದ ನೀನವಿ
ವೇಕಿಯೇ ಬಿಡು ಮನದ ದುಗುಡವನೆಂದನಾ ನೃಪತಿ ೧೧



ಮರೆದು ಮಲಗಿದಳವಳ ಮಗ್ಗುಲ ಸೆರಗ ಮೆಲ್ಲನೆ
ಜಾರಿಸುತಲಾಗರಸ ವಸನವ ಕೊಂಡು

ಎಂದು ಸತಿಯನು ಸಂತವಿಟ್ಟರ
ವಿಂದನಾಭಧ್ಯಾನದಲಿ ಬರೆ
ಮುಂದೆ ಘೋರಾರಣ್ಯವೆಸೆದುದು ಘನಭಯಂಕರದಿ
ಸಂದ ಖಗ ಮೃಗವಲ್ಲಿ ನೆರೆದಿರೆ
ಬಂದು ಹೊಕ್ಕರು ಕಾನನವನರ
ವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ ೧೨

ಲೋಕಕಧಿಪತಿ ನಳನ ರಾಣಿಗೆ
ಶೋಕ ಪರ್ಬಿದ ತೆರದಿ ಕತ್ತಲೆ
ಲೋಕವನು ಮುಸುಕಿದುದು ಭರಣಿಯ ಮುಚ್ಚಿದಂದದಲಿ
ಭೀಕರ ಧ್ವನಿಗಳಿಗೆ ಹೆದರಿದ
ಳಾ ಕಮಲಲೋಚನೆಯು ಕಂಡು ವಿ
ವೇಕನಿಧಿ ಸಂತೈಸಿ ಬಿಗಿಯಪ್ಪಿದನು ತೂಪಿರಿದು ೧೩

ಎಲ್ಲರೋಪಾದಿಯ ಪತಿವ್ರತೆ
ಯಲ್ಲವೀ ದಮಯಂತಿ ಬಿಡುವವ
ಳಲ್ಲ ತನ್ನನು ತರುಣಿ ಕಾಣದ ಕಡೆಗೆ ತೆರಳಿದರೆ
ಅಲ್ಲಿ ತಂದೆಯ ಮನೆಗೆ ಹೋಗುವ
ಳಿಲ್ಲಿ ತಾನಿರೆ ಬಿಡಳೆನುತ ಮನ
ದಲ್ಲಿ ಯೋಚಿಸಿ ನಿದ್ರೆಗೈಸಿದ ತನ್ನ ನಿಜಸತಿಯ ೧೪

ಮರೆದು ಮಲಗಿದಳವಳ ಮುಗ್ಗುಲ
ಸೆರಗ ಮೆಲ್ಲನೆ ಜಾರಿಸುತಲಾ
ಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ
ಮರುಗಿದನು ಕಣ್ಣೀರಿನಲಿ ಶ್ರೀ
ಹರಿ ಜಗತ್ಪತಿ ಅಡವಿಯಲಿ ಎ
ಚ್ಚರಿಸದೇ ತಾನೆಂತು ಪೋಗುವೆನೆನುತ ಬಿಸುಸುಯ್ದು ೧೫

ಮಡದಿಯುಗಲಿದ ಬಳಿಕ ಹತ್ತೆಂ
ಟಡಿಯ ದಾಂಟುವ ಮರಳಿ ನಿಜಸತಿ
ಯೆಡೆಗೆ ತಿರುಗುವ ಚಂದ್ರಬಿಂಬಾನನವನೀಕ್ಷಿಸುವ
ಅಡಸಿದತಿದುಃಖದಲಿ ಮೆಲ್ಲಡಿ
ಯಿಡುವ ಸತಿಯನು ನೋಡಿ ಮನದು
ಗ್ಗಡದ ಶೋಕದಿ ನಡೆದ ನಳನೃಪನೊಂದು ಯೋಜನವ ೧೬

ಕರುಣದೋರದೆ ನೃಪತಿ ಇನಿಯಳ
ತೊರೆದು ಬಿಸುಟನು ವನದೊಳಗೆ ಹುಲಿ
ಕರಡಿ ವೃಗದುಪಟಳವ ತಾನಿನ್ನೆಂತು ಸೈರಿಪಳೋ
ಮೊರೆಯ ಲಾಲಿಸಿ ನೋಳ್ಪೆನೆಂದುರು
ತರದ ಪ್ರೇಮದಿ ಬಂದು ಸತಿಗೆ
ಚ್ಚರಿಸುವಂದದಿ ತರಣಿ ತಲೆದೋರಿದನು ಪೂರ್ವದಲಿ ೧೭

ನಳಿನಮುಖಿ ಮೈಮುರಿದು ನಿದ್ರೆಯ
ತಿಳಿದು ಮೆಲ್ಲನೆ ನೋಡಿದಳು ಎಡ
ಬಲವನೀಕ್ಷಿಸಿ ಪತಿಯ ಕಾಣದೆ ಬಲಿದ ಮೂರ್ಛೆಯಲಿ
ಮಲಗಿದಳು ಮೈಮರೆದು ನಿಮಿಷಕೆ
ತಿಳಿದು ಕಾಣದೆ ಕಾತರದೆ ಹಂ
ಬಲಿಸಿ ಹಲುಬಿದಳಲ್ಲಿ ಗಿರಿ ತರುನಿಕರ ಮಧ್ಯದಲಿ ೧೮

ಹಾ ರಮಣ ನಳನೃಪತಿ ಹಾ ರಣ
ಧೀರ ಸದ್ಗುಣಹಾರ ರಿಪು ಸಂ
ಹಾರ ನಿತ್ಯೋದಾರ ನಿರ್ಮಳ ಸತ್ಯಸಂಚಾರ
ಘೋರ ಕಾನನದೊಳಗೆ ನಂಬಿದ
ನಾರಿಯನು ಬಿಸುಡುವರೆ ತನಗಿ
ನ್ನಾರು ಗತಿ ಮುಖದೋರೆನುತ ಹಲುಬಿದಳು ದಮಯಂತಿ ೧೯

ಪೊಡವಿಗಿಳಿವೆನೊ ಹಾಯ್ದು ಪಾವಕ
ನೊಡಲ ಹೊಗುವೆನೊ ಕಾಳಕೂಟದ
ಮಡುವಿನೊಳು ಮುಳುಗುವೆನೊ ಹಾಸರೆಯೊಳಗೆ ಬೀಳುವೆನೊ
ಅಡಸಿದಾಪತ್ತಿನಲಿ ಗರಳವ
ಕುಡಿವೆನೊ ತಾನೆನುತ ಸತಿ ಬಾಯ್
ಬಿಡುತ ಕಾನನದೊಳಗೆ ತಿರುಗಿದಳಬಲೆ ಶೋಕದಲಿ ೨೦

ಮುಡಿ ಚದುರಿ ಹುಡಿಯೊಳಗೆ ಹೊರಳುತ
ಲೊಡಲನೀಡಾಡಿದಳು ಧರೆಯೊಳ
ಗಡವಿ ಪಾಲಾಗೆಂದು ಪಡೆದಳೊ ತನ್ನ ನಿಜಜನನಿ
ಮಡದಿಯರು ತನ್ನಂತೆ ಲೋಕದೊ
ಳೊಡಲ ತೆತ್ತವರುಂಟೆ ಶೋಕದಿ
ಪೊಡವಿಪತಿ ಮುಖದೋರೆನುತ ಹಂಬಲಿಸಿದಳು ಪತಿಯ ೨೧

ಮಾನವಾಧಿಪ ಕೇಳು ಬನದಲಿ
ಮಾನಿನಿಗೆ ಮತ್ತೊಂದು ಕಂಟಕ
ಹಾನಿ ಬಂದುದದೇನನೆಂಬೆನು ಪತಿಗೆ ಬಾಯ್ಬಿಡುತ
ಕಾನನದ ಬಳಿವಿಡಿದು ಬರೆ ಸು
ಮ್ಮಾನದಲಿ ತರಗೆಲೆಯ ಹಕ್ಕೆಯ
ಮೌನದಲಿ ಉರಗೇಂದ್ರನಿದ್ದನು ಬಲಿದ ನಿದ್ರೆಯಲಿ ೨೨

ತರಳೆ ಕಾಣದೆ ಬರುತ ಮೆಟ್ಟಿದ
ಳುರಗಪತಿಯನು ಕೋಪದಲಿ ಮಿಗೆ
ಸುರಿವ ಗರಳದಿ ರೌದ್ರಮಯರೂಪಿನಲಿ ಬಾಲಕಿಯ
ತರುಬಿ ಹಿಡಿದನು ತವಕದಲಿ ಹಿಮ
ಕರನ ನುಂಗುವ ರಾಹುವಿನವೋಲ್
ಅರಸ ಕೇಳಂಗನೆಯ ವಿಧಿಯನು ಹೇಳಲೇನೆಂದ ೨೩

ಹಾ ರಮಣ ನಳನೃಪತಿ ತನ್ನನು
ಆರಿಗೊಪ್ಪಿಸಿ ಕಳೆದೆ ಹರಿ ಹರಿ
ಕ್ರೂರಸರ್ಪನ ಬಾಯ್ಗೆ ತುತ್ತಾದೆನೆ ಜಗನ್ನಾಥ
ಆರಿಗೊರಲುವೆನೆನ್ನ ಪ್ರಾಣವ
ನಾರು ಕಾವವರಕಟ ಬಿಡಿಸೈ
ವಾರಿಜಾಕ್ಷ ಮುಕುಂದ ಸಲಹೆಂದೊರಲಿದಳು ತರಲೆ ೨೪

ಶೈಲಶಿಖರದೊಳಿರ್ದು ಕೇಳಿದ
ಬಾಲಕಿಯ ಶೋಕವನು ಬಿಲ್ಲಿನ
ಕೋಲುಗಾರನು ಕರದ ಬಿಲ್ಲಿನ ಶಬರನೈತಂದು
ಆ ಲತಾಂಗಿಯ ಪಿಡಿದು ನುಂಗುವ
ಕಾಲಭುಜಗನ ಕಂಡು ನಿಜಕರ
ವಾಲದಲಿ ಖಂಡಿಸಿದವನಹಿಯನು ಬಿಡಿಸಿದನು ಸತಿಯ ೨೫

ಬಂದು ಕೆಂದಾವರೆಯ ಕೊಳದಲಿ
ಮಿಂದು ನಿಂದಿರೆ ಶಬರನೆಂದನು
ಇಂದುಮುಖಿ ನೀನೆನಗೆ ಸತಿಯಾಗೆನಲು ಖತಿಗೊಂಡು
ಇಂದೆನಗೆ ಅಸುವಿತ್ತು ಸಲಹಿದ
ತಂದೆಯಲ್ಲವೆ ನೀನು ಕೇಳು ಪು
ಳಿಂದ ಮುಳಿದರೆ ಶಪಿಸುವೆನು ಹೋಗೆಂದಳಿಂದುಮುಖಿ ೨೬

ತರುಣಿ ಕೋಪಿಸಿ ನುಡಿಯೆ ಭಯದಲಿ
ಶಿರವ ಬಾಗಿ ಪುಳಿಂದನತ್ತಲು
ಮರಳಿದನು ದಮಯಂತಿ ಮನದಲಿ ಪತಿಗೆ ಹಂಬಲಿಸಿ
ಮರುಗುವಳು ಬನದೊಳಗೆ ಭೂಪನ
ನರಸಿ ಕಾಣದೆ ಬಯಲನಪ್ಪುವ
ಉರವಣಿಪ ಕಣ್ಣೀರಿನಲಿ ನಡೆತಂದಳಿಂದುಮುಖಿ ೨೭

ಅರಸ ಕೇಳಾಶ್ಚರ್ಯವನು ಸತಿ
ಬರುತಿರಲು ಕಾನನದಿ ನೆರೆದಿಹ
ಮರುಳು ಬಳಗವು ಭೂತ ಭೇತಾಳಗಳು ತೊಲಗಿದವು
ಶರಭ ಮೊಲ ಕಾಡಾನೆ ಸಿಂಹಗ
ಳಿರದೆ ಜಾರಿದವಲ್ಲಿ ಸತಿಯುಳ
ಪರಮ ಪಾತಿವ್ರತ್ಯಮಹಿಮೆಯನರಸ ಕೇಳೆಂದ ೨೮

ಮುಂದೆ ಕಂಡಳು ಹೊಳೆವ ತಾಪಸ
ವೃಂದವನು ಕಂಬನಿಯ ಸುರಿಸುತ
ಬಂದ ವನಿತೆಯ ಕೇಳಿದರು ಮುನಿವರರು ಕರುಣದಲಿ
ಇಂದುಮುಖಿ ನೀನಾರು ಇಲ್ಲಿಗೆ
ಬಂದ ಹದನೇನೆನಲು ಶೋಕದಿ
ನೊಂದು ನುಡಿದಳು ಮುನಿಗಳಿಗೆ ಕೈಮುಗಿದು ವಿನಯದಲಿ ೨೯

ಭೂತಳವ ನಳನೃಪತಿ ಜೂಜಲಿ
ಸೋತು ಪುಷ್ಕರಗಿತ್ತು ಸತ್ಯದ
ನೀತಿ ತಪ್ಪದೆ ಬಂದು ಬನದಲಿ ತನ್ನನಗಲಿದನು
ಧಾತುಗುಂದಿದೆ ಪತಿಯ ಕಾಣದೆ
ಭೀತಿಯಲಿ ನಿಮ್ಮಡಿಯ ಕಂಡೆನು
ಭೂತದಯೆ ನಿಮಗುಂಟಲಾ ಸಲಹೆಂದಳಿಂದುಮುಖಿ ೩೦

ನೆನೆದುದಂತಃಕರಣ ಕೇಳುತ
ಮುನಿಗಳೆಂದರು ತಾಯೆ ಶೋಕದಿ
ಕನಲಿ ಕಂಗೆಡಬೇಡ ನಿಜಪತಿ ರಾಜ್ಯಸಿರಿ ಸುತರು
ನಿನಗೆ ಬಂದಪುದಿನ್ನು ಯೋಗದ
ಮನದೊಳರಿದೆವು ನಾವು ಅಂಜದಿ
ರೆನುತ ಪೇಳಿಯದೃಶ್ಯರಾದರು ಮುನಿಗಳೊಗ್ಗಿನಲಿ ೩೧

ಆ ತರುಣಿ ಬೆರಗಾಗಿ ಕನಸಿನ
ರೀತಿಯಾಯ್ತು ಕಟಕಟ ಮಾನಿ
ಪ್ರಾತವೆತ್ತಲು ಸರಿದುದೋ ವಿಸ್ಮಯವಲಾ ಎನುತ
ಆ ತಳೋದರಿ ಪತಿಯ ಕಾಣದೆ
ಕಾತರದಿ ಬರುತಿರಲು ಕಂಡರು
ನೂತನದ ಬೇಹಾರಿಗಳು ತೊಳಲುವ ನಿತಂಬಿನಿಯ ೩೨

ಆರಿವಳು ವನಲಕ್ಷ್ಮಿಯೋ ಸುರ
ನಾರಿಯೋ ಮಾರಾಂಗನೆಯೋ ಮದ
ನಾರಿಸತಿಯೊ ಸರಸತಿಯೊ ಮೇಣಸುರ ಮಾನಿನಿಯೊ
ಆರ ವನಿತೆಯೊ ಕಾಮರೂಪದ
ಭೂರಿಭೂತವೊ ತಿಳಿಯಲರಿದಿವ
ಳಾರೆನುತ ಭಯಗೊಂಡು ಓಡಿದರಲ್ಲಿ ಬಣಜಿಗರು ೩೩

ನೋಡಿದಳು ದಮಯಂತಿ ಭೀತಿಯ
ಲೋಡುತಿಹ ಬೀಡಿಕೆಯು ವೈಶ್ಯರ
ಹೇಡಿತನವನು ಕಂಡು ನಸುನಗುತಲ್ಲಿಗೈತಂದು
ಓಡಲೇತಕೆ ನಿಮಗುಪಹತಿಯ
ಮಾಡುವಳು ತಾನಲ್ಲ ಜಗಕತಿ
ರೂಢಿಸಿದ ನಳನೃಪನ ಸತಿ ತಾನೆಂದಳಿಂದುಮುಖಿ ೩೪

ವೀರಸೇನನ ತನಯ ನಳನೃಪ
ಧಾರಿಣಿಯನುರೆ ಸೋತು ಕಾರ್ಯದ
ಕಾರಣದಿ ನಡೆತಂದನಡವಿಗೆ ತನ್ನನಗಲಿದನು
ದಾರಿತಪ್ಪಿದೆನಿಲ್ಲಿ ನಿಮ್ಮನು
ಸೇರಿದೆನು ಪರದೇಶಿ ತನಗೊಂ
ದೂರ ತೋರಿರೆ ನೀವೆನುತ ತುಂಬಿದಳು ಕಂಬನಿಯ ೩೫

ತಾಯೆ ನಿಮ್ಮ ಪದಾಬ್ಜ ದರ್ಶನ
ವಾಯಿತೆಮಗಿಂದಿನಲಿ ಧನ್ಯರು
ಈಯವಸ್ಥೆಗೆ ತಂದುದೇ ವಿಧಿ ನಿಮ್ಮನೆನುತೆರಗಿ
ನೋಯದಿರಿ ಇದೆ ಚೈದ್ಯಪುರವೆಂ
ದಾ ಯುವತಿಯೊಡಗೊಂಡು ಬರುತಿರೆ
ತೋಯಜಾಪ್ತನು ಪಶ್ಚಿಮಾಂಬುಧಿಗಿಳಿದನೊಲವಿನಲಿ ೩೬

ಹಗಲು ಸವೆದುದು ಹೊಂಬಿಸಿಲು ನೆರೆ
ತೆಗೆದುದತಿವೇಗದಲಿ ಕತ್ತಲೆ
ಬಿಗಿದುದವನೀತಳವ ಪೆಟ್ಟಿಗೆ ಮುಚ್ಚಿದಂದದಲಿ
ಸುಗುಣೆ ದಮಯಂತಿಯನು ನೋಡಲು
ಸೊಗಸಿಬಂದನಿಮಿಷರವೋಲ್ ತಾ
ರೆಗಳು ಮೂಡಿದವಂಬರದಿ ಪ್ರಜ್ವಲಿಪ ಕಾಂತಿಯಲಿ ೩೭

ಅವನಿಪತಿ ಕೇಳ್ ವೈಶ್ಯಕುಲ ಸಂ
ಭವರು ಹಾಯ್ಕಿದರಲ್ಲಿ ಗೂಡಾ
ರವನು ಬಿಟ್ಟರು ಪಾಳಯವ ಮಲಗಿದರು ರಾತ್ರಿಯಲಿ
ಅವಧಿ ಬಂದುದನೇನನೆಂಬೆನು
ಕವಿದು ಕಾಡಾನೆಗಳು ಮಡುವಿಗೆ
ತವಕದಿಂ ನೀರಡಿಸಿ ಬಂದುದು ಗಿರಿಗಳಂದದಲಿ ೩೮

ತುಳಿದವು ಮದಕರಿಗಳವರನು
ಸೀಳಿ ಹಾಯ್ಕಿತು ಕೆಲರ ಮುಮ್ಮೊನೆ
ಯಾಳು ಕವಿದುದು ಹೊಕ್ಕು ಕಾದಿದರತುಳ ಭುಜಬಲರು
ತಾಳಬಲ್ಲರೆ ಕೆಲರು ಕರಿಗಳ
ದಾಳಿಗಿದಿರೇ ಮುರಿದು ಹಾಯ್ದರು
ಹೇಳಲೇನದನರಸ ತೆಗೆದೋಡಿದರು ದೆಸೆದೆಸೆಗೆ ೩೯

ಅಮ್ಮ ಕೇಳೀ ಮದಗಜಂಗಳು
ನಮ್ಮ ಕೊಲುತಿವೆ ಹದನ ಕಾಣೆನು
ನಮ್ಮನೇ ನೆರೆನಂಬಿ ಬಂದಿರಿ ಇದಕೆ ಗತಿಯೇನು
ನಿಮ್ಮನಿಲ್ಲಿಗೆ ತಂದುದೇ ವಿಧಿ
ಬೊಮ್ಮ ಬರಹವ ಮೀರುವವರಾ
ರಮ್ಮ ಲೋಕದೊಳೆಂದು ಮರುಗಿದ ವೈಶ್ಯಕುಲತಿಲಕ ೪೦

ಜನನವೇ ವರಭೀಮರಾಯನ
ಮನೆ ತನಗೆ ನಳಚಕ್ರವರ್ತಿಯೆ
ಇನಿಯನಗ್ಗದ ವೀರಸೇನನೆ ಮಾವನಾಗಿರಲು
ವನದೊಳೀಪರಿ ಕರಿಗಳಿಗೆ ತಾ
ತನುವ ತೆರಬೇಕೆಂಬ ಕಾರಣ
ತನಗಿರಲು ನೀವೇನಮಾಡುವಿರೆಂದಳಿಂದುಮುಖಿ ೪೧

ಎನುತ ಕಣ್ಣೆವೆ ಬಿಗಿದು ಮನದಲಿ
ನೆನೆದಳಚ್ಯುತನಂಘ್ರಿಕಮಲವ
ವನಜನಾಭ ಮುಕುಂದ ಸಲಹೆನೆ ಕರಿಗಳಾಕ್ಷಣಕೆ
ವನಕೆ ಮರಳಿದವವರನೆಲ್ಲರ
ವನಿತೆ ಸಂತೈಸಿದಳು ದೈವವ
ನೆನೆವ ಭಕ್ತರಿಗುಂಟೆ ಭಯವೆಲೆ ನೃಪತಿ ಕೇಳೆಂದ ೪೨

ಕಳೆದರಂದಿನ ರಾತ್ರಿಯನು ರವಿ
ಬೆಳಗಿದನು ಪೂರ್ವಾದ್ರಿಯಲಿ ಸಂ
ದಣಿಸಿ ನಡೆದರು ಮುಂದೆ ಕಂಡರು ಚೇದಿಪಟ್ಟಣವ
ಹೊಳೆವ ಹೇಮದ ಸೌಧಗಳ ತಳ
ತಳಿಪ ನೆಲೆಯುಪ್ಪರಿಗೆಗಳ ಕಂ
ಡೊಲಿದು ಮನ ಹರುಷದಲಿ ಹೊಕ್ಕರು ಸತಿಸಹಿತ ಪುರವ ೪೩

ರಸದ ಲೇಪದ ವಿಸುನಿಯೊ ಮಲಿನ
ವಸನದಲಿ ಹುದುಗಿರ್ದ ರತ್ನವೊ
ನಸಿದ ಮೇಘದೊಳೆಸೆವ ಚಂದ್ರನ ಬಿಂಬದಂದದಲಿ
ಶಶಿವದನೆ ಬರುತಿರಲು ಪುರಜನ
ವೊಸೆದು ನೋಡಿದುದಲ್ಲಿಗಲ್ಲಿಗೆ
ಬಿಸಜಮುಖಿಯಿವಳಾರೆನುತ ಬೆರಗಾಯ್ತು ಜನನಿಕರ ೪೪

ಹೇಮದುಪ್ಪರಿಗೆಯಲಿ ನೃಪಸತಿ
ಕಾಮಿನಿಯರೋಲಗದೊಳೊಪ್ಪುತ
ತಾಮರಸದಳನಯನೆ ದಮಯಂತಿಯನು ತಾ ಕಂಡು
ಈ ಮಹಾಸತಿಯಾವಳೋ ಸು
ತ್ರಾಮನರಸಿಯೊ ಎನುತ ಕರೆಸಿದ
ಡಾಮಹಿಳೆ ಬಂದಳು ನೃಪಾಲನ ಸತಿಯ ಸಮ್ಮುಖಕೆ ೪೫

ತಾಯೆ ನೀನಾರಾವದೇಶದ
ರಾಯನರಸಿಯಿದೇನು ನಿನಗೀ
ಪ್ರಾಯದಲಿ ಕಳೆಕಂದಿ ಮಾಸಿಹುದೇನು ಪೇಳೆನಲು
ಆ ಯುವತಿ ಕಣ್ಣೀರಿನಲಿ ಪೂ
ರಾಯ ಶೋಕದೊಳೆಂದಳಾ ತರ
ಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು ೪೬

ಕ್ಷಿತಿಯನೆಲ್ಲವ ಸೋತು ಜೂಜಲಿ
ಪತಿ ವನಕೆ ಬಂದೆನ್ನನಗಲಿದ
ಮತಿವಿಕಳತನದಿಂದೆ ತಿರುಗುತ ಬಂದೆ ನಿಮ್ಮೆಡೆಗೆ
ಹಿತವರಾರನು ಕಾಣೆ ನೀವೇ
ಗತಿಯೆನಗೆ ಪರದೇಸಿಯನು ಪರ
ಹಿತವೆ ಪುಣ್ಯವು ರಕ್ಷಿಸೆಂದಳು ನಳನೃಪನ ರಾಣಿ ೪೭

ನುಡಿಯ ಕೇಳುತ ಚೈದ್ಯಭೂಪನ
ಮಡದಿ ನೂಪುರ ಘಲ್ಲುಘಲಿರೆನೆ
ಅಡಿಯಿಡುತ ಬಂದಪ್ಪಿ ಸೆರೆಗಿನೊಳೊರಸಿ ಕಂಬನಿಯ
ಬಿಡು ವ್ಯಥೆಯ ವರಭೂಷಣಂಗಳ
ತೊಡು ದುಕೂಲವನುಡು ಸುಮಾಲ್ಯವ
ಮುಡಿಗೆ ಸೇರಿಸು ತರುಣಿ ಎಂದಳು ಚೈದ್ಯನೃಪನರಸಿ ೪೮

ದೇವಿ ನಿಮ್ಮುಪಚಾರವೇ ಸಂ
ಭಾವನೆಯಲಾ ತನಗೆ ಬೇರಿ
ಸ್ನಾವ ಭೂಷಣವೇಕೆ ದೇಸಿಗರಾವು ನಿಮ್ಮಡಿಯ
ಸೇವೆಯಲಿ ತಾನಿಹೆನು ಹೀನವ
ನಾವು ಬಳಸುವರಲ್ಲ ತನ್ನನು
ಕಾವ ಹದನನು ನೀವೆ ಬಲ್ಲಿರಿಯೆಂದಳಾ ಸತಿಗೆ ೪೯

ಎನಲು ನಸುನಗುತೆಂದಳಾ ಮಾ
ನಿನಿಗೆ ನಮ್ಮಿಂದಾಗದುಪಹತಿ
ನಿನಗೆ ಪೇಳೆವು ಹೀನಕೆಲಸವ ಚಿಂತೆ ಬೇಡಿನ್ನು
ತನಗೆ ಮಗಳು ಸುನೀತಿಯಾಕೆಯ
ಮನೆಯೊಳಿರು ಸೈರಂಧ್ರಿತನದಿಂ
ದನವರತ ನೀನೆಂದು ನೇಮಿಸಿ ಕಳುಹಿದಳು ಮನೆಗೆ ೫೦

ಮನದ ದಗೆಯುಡಗಿತು ಸುನೀತಿಯ
ಮನೆಯೊಳಿದ್ದಳು ಭೇದವಿಲ್ಲದೆ
ಅನುದಿನದೊಳಾಹಾರ ನಿದ್ರಾಂಗನೆಯ ತಾನುಳಿದು
ವನಜನಾಭನ ಕರುಣದಲಿ ಬಂ
ದಿನಿಯನೆಂದಿಗೆ ಮುಖವ ತೋರುವ
ನೆನುತ ಚಿಂತಿಸುತಿರ್ದಳಾ ಮನಪುರದ ಚೆನ್ನಿಗನ ೫೧

## ೬. ನಿಲಿಸಿದನರಸ ಬಾಹುಕನ

ಕೇಳು ಕುಂತೀತನಯ ನಿಷಧನೃ
ಪಾಲನಿತ್ತಲು ಮರೆದು ಮಲಗಿದ
ಬಾಲಕಿಯ ಬಿಟ್ಟಡವಿಯಲಿ ಹೊರವಂಟನಾಶ್ರಮವ
ಕಾಲವಾವನ ಕೀಳು ಮಾಡದು
ಶೂಲಪಾಣಿಯೆ ಬಲ್ಲ ನಳಭೂ
ಪಾಲಕನ ವಿಧಿಯನೇನೆಂಬೆನು ಬಂದನಡವಿಯಲಿ ೧

ವನಿತೆ ಮಲಗಿಹಳೊ ಅಧೈರ್ಯದಿ
ನೆನೆವಳೊ ದೈವವನು ನಿದ್ರೆಯ
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ
ಕನಲಿ ವಿಧಿಯನು ಬೈವಳೊ ಕಂ
ಬನಿಯ ಸುರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆಯೆಂತಿಹಳೆನುತ ಬಿಸುಸುಯ್ದ ೨

ಸುತರ ಪರರೆಡೆಗಿತ್ತು ನಂಬಿದ
ಸತಿಯ ತಂದಡವಿಯಲಿ ಮಲಗಿಸಿ
ಮತಿವಿಕಳನಾದೆನು ಪುರಾಕೃತ ಕರ್ಮಫಲವೈಸೆ
ಕ್ಷಿತಿಯೊಳಾರುಂಟೆನ್ನವೊಲ್ ನಿಜ
ಸತಿಗೆ ತಪ್ಪಿದ ಬಾಹಿರನು ಎಂ
ದತಿಶಯದ ಶೋಕದಲಿ ನಡೆದನು ಶಿವಶಿವಾ ಎನುತ ೩

ಲೋಕದೊಳಗಗ್ಗಳಿಯ ಮಹಿಪರ
ನೇಕರವರೊಳಗಾರನೊಲ್ಲದೆ
ನೂಕಿ ತನ್ನನೆಯೊಲಿದು ಕೈಕೊಂಡಳು ಸರೋಜಮುಖಿ
ಆಕೆಯಗಲಿದ ಪಾತಕನು ತಾ
ನೇಕೆ ಧರೆಯೊಳು ಶಿವಶಿವಾ ಎಂ
ದಾಕಮಲಲೋಚನೆಗೆ ಮರುಗುವನರಸ ಕೇಳೆಂದ ೪

ಈ ಪರಿಯೊಳತಿಶೋಕದಿಂದ ಪ್ರ
ಳಾಪಿಸುತ ನಳನೃಪತಿ ಹೆಚ್ಚಿದ
ತಾಪದಲಿ ಕಡುನೊಂದು ಬಳಲಿದ ತನ್ನ ಮನದೊಳಗೆ
ಶ್ರೀಪತಿಯ ನೆಲೆಗೊಳಿಸಿ ಹೃದಯದ
ತಾಪದೊಳು ಬರುತಿರಲು ಮುಂದೆ ಸ
ಮಾಪದಲಿ ಹುತವಹನ ಮಹಿಮೆಯ ಕಂಡನವನೀಶ ೫

ಬಿದಿರಮೆಳೆ ಧಗಧಗಿಸೆ ಘನ ಹೆ
ಬ್ಬಿದಿರು ಛಟಛಟರೆನಲು ಉರಿಯೊಳು
ಕದಳಿಗಳು ಸಿಮಿಸಿಮಿಸೆ ತರುಗಳನುರುಹಿ ಮೆಳೆಗಳನು
ಗದಗದಿಸೆ ಗುಹೆಯಲಿ ಮೃಗತತಿ
ಹೆದರಿ ಹಾಯ್ದವು ಪಕ್ಷಿಸಂಕುಲ
ಉದುರಿದವು ಗರಿಸಹಿತ ಬೆಂದವು ವನದ ಮಧ್ಯದಲಿ ೬

ತೆಗೆದು ಹಾಯ್ದುದು ಸಿಂಹ ಶಾರ್ದೂ
ಲಗಳು ಕರಿಗಳ ಹಿಂಡು ನಾನಾ
ಮೃಗಗಳಗಣಿತ ಬೆಂದು ಬಿದ್ದವು ನಿಮಿಷ ಮಾತ್ರದಲಿ
ಚಿಗಿದು ಹಾಯ್ದವು ಗಂಡಭೇರುಂ
ಡಗಳು ಮೊದಲಾದಖಿಳ ಮೃಗಪ
ಕ್ಷಿಗಳು ಕೆಡೆದುದು ಕಿಚ್ಚಿನೊಳಗವನೀಶ ಕೇಳೆಂದ ೭



ಪೋಗುತಿದೆ ಎನ್ನಸುವು ಸಲಹು ಷಡಾಗವುಜ್ಞ ನೃಪಾಲ

ಪ್ರಳಯದಿನದಲಿ ಸುಳಿವ ವಡಬಾನ
ಳನೊ ಯೆನಲಾ ವನವ ಸುಡುತಲ್ಲಿ
ಸುಳಿಸುಳಿಯುತಾಹಾರಗೊಳುತಿರಲಲ್ಲಿ ಧ್ವನಿಯಾಯ್ತು
ಸಿಲುಕಿದೆನು ಪಾವಕನೊಳಕಟಕ
ಟಳಿವೆ ಹಾ ನೃಪಕುಲ ಶಿರೋಮಣಿ
ಯೊಲಿದು ಬಿಡಿಸೈ ಸುಕೃತ ನಿನಗಹುದೆಂದುದಾ ನಿನದ ೮

ಆಗಲಾ ಧ್ವನಿಗೇಳಿ ನೃಪತಿ ಸ
ರಾಗದಿಂಪಲೆ ಬಂದು ಹೊಕ್ಕನು
ಕೂಗಿದವರಾರೆನುತ ಬರುತಿರೆ ಕಂಡನುರಗಪತಿ
ಪೋಗುತಿದೆ ಎನ್ನಸುವು ಸಲಹು ಪ
ಡಾಗಮುಜ್ಞ ನೃಪಾಲ ಎನಲಾ
ಭೋಗಿಯನು ಕಂಡರಸ ನೀನಾರೆಂದು ಬೆಸಗೊಂಡ ೯

ಉರಗಪತಿ ಕಾರ್ಕೋಟಕನು ತಾ
ನರಸ ಕೇಳೈ ಬನದೊಳಿರುತಿರೆ
ಪರಮಋಷಿ ಬಂದೆನ್ನ ತಾಗಿದನಂದು ಖಾತಿಯಲಿ
ಕರೆದುಕೊಟ್ಟನು ಶಾಪವನು ಸಂ
ಚರಿಸದಂತಿರೆ ಎನಗೆ ಇದ ಪರಿ
ಹರಿಸಲೆಂದಿಗೆ ಮುನಿಪ ಕರುಣಿಸು ಎಂದೊಡಿಂತೆಂದ ೧೦

ಇರಲಿರಲು ಕಾಲಾಂತರಕೆ ಭೂ
ವರನು ನಳನೃಪನಿಲ್ಲಿಗೈದುವ
ಧರಣಿಪನ ಕರಕಮಲ ಸೋಂಕಲು ಶಾಪವಿದು ಬಳಿಕ
ಪರಿಹರಿಪುದೆನೆ ಮುನಿಯ ವಚನದಿ
ಬರವ ಹಾರುತ್ತಿರಲು ಬಂದೈ
ಕರುಣದಿಂದಗ್ನಿಯನು ಪರಿಹರಿಸೆಂದನುರಗಪತಿ ೧೧

ಕರುಣದಲಿ ನೃಪ ಭೀತಿಗೊಳ್ಳದೆ
ಯುರಗಪತಿಯನು ತೆಗೆದು ಅನಲನ
ಉರಿಯ ತಪ್ಪಿಸಿ ಕೊಳನ ತೀರಕೆ ತಂದು ಉಪಚರಿಸೆ
ಕರವಿಡಿದು ಧರಣಿಪನ ಕಚ್ಚಿದ
ಡುರವಣಿಸಿ ವಿಷವೇರಿ ನೃಪತಿಯ
ಪರಮತೇಜದ ದೇಹ ಕೆಟ್ಟಿತು ವಿಕೃತರೂಪಾಗಿ ೧೨

ದೊಡ್ಡ ಹೊಟ್ಟೆಯು ಕೂನು ಬೆನ್ನಿನ
ಅಡ್ಡವೋರೆಯು ಗಂಟು ಮೂಗಿನ
ದೊಡ್ಡ ಕೈಕಾಲುಗಳು ಉದುರಿದ ರೋಮ ಮೀಸೆಗಳ
ಜೆಡ್ಡುದೇಹದ ಗುಜ್ಜುಗೊರಲಿನ
ಗಿಡ್ಡುರೂಪಿನ ಹರಕು ಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ೧೩

ಮಾರನಾಕಾರದ ನೃಪಾಲಕ
ಕ್ರೂರರೂಪಾದನು ಪುರಾಕೃತ
ಮೀರಲಾರಳವೆಂದು ನುಡಿದನು ತನ್ನ ಮನದೊಳಗೆ
ತೋರಮಾಣಿಕವೆಂದು ಪಿಡಿದರೆ
ಭೂರಿಕೆಂಡವಿದಾಯ್ತು ಶಿವಶಿವ
ಕ್ರೂರಜಂತುಗಳೊಡನೆ ಸಖತನ ಫಲಿಸಿತೆನಗೆಂದ ೧೪

ಮುನ್ನ ಮಾಡಿದ ಕರ್ಮಫಲವಿದು
ಬೆನ್ನಬಿಡದಿಹೆ ಉರಗಪತಿ ಕೇ
ಳಿನ್ನು ನೋಯಲಡೇಕೆ ತಾನೇ ಪಾಪಿಯಾದೆನಲಾ
ಪನ್ನಗಾರಿಧ್ವಜನ ಕೃಪೆ ತನ
ಗಿನ್ನು ತಪ್ಪಿದ ಬಳಿಕ ಲೋಕದೊ
ಳಿನ್ನು ಸೈರಿಸಲಾರವಶವೆಂದೆನುತ ಮರುಗಿದನು ೧೫

ಏಕ ನೃಪತಿ ವೃಥಾ ಮನೋವ್ಯಥೆ
ಕಾಕ ಬಳಸಲು ಬೇಡ ನೀನವಿ
ವೇಕಿಯೇ ಸಾಕಿನ್ನು ನಿನಗುಪಕಾರವಂಜದಿರು
ಲೋಕ ನಿನ್ನನ್ನು ಕಾಣದಂತಿರ
ಬೇಕೆನುತಲೇರಿಸಿದೆ ಗರಳವ
ನೇಕ ಉಪಕಾರಾರ್ಥವಿದರಿಂದಹುದು ನಿನಗೆಂದ ೧೬

ಜನಪ ಕೇಳ್ಳೈ ಧರೆಗೆ ಋತುಪ
ರ್ಣನು ಮಹಾರಾಜೇಂದ್ರ ಗುಣನಿಧಿ
ಇನಕುಲಾಂಬುಧಿಚಂದ್ರನಾತನ ಪುರವಯೋಧ್ಯೆಯದು
ನಿನಗೆ ಬಹುದಕ್ಷದ ಹೃದಯುವಾ
ತನಲಿ ನೀನವಗಶ್ವಹೃದಯುವ
ನನುಗೊಳಿಸು ಸಾಕಿನ್ನು ಚಿಂತಿಸಬೇಡ ಹೋಗೆಂದ ೧೭

ಪೊಡವಿಪನನೋಲೈಸು ವಾರ್ಷೆಯ
ಪಿಡಿದು ಬಾಹುಕನೆಂಬ ನಾಮದಿ
ನಡೆಸು ರಥವನು ಹೀನವೃತ್ತಿಯದಲ್ಲ ನಿನಗಿನ್ನು
ಬಿಡದೆ ಮುನ್ನಿನ ರೂಪು ಬೇಕಾ
ದಡೆ ನೆನೆವುದಾ ಪಕ್ಷಿಗಳ ಹ
ಚ್ಚಡವನೀವುವು ಧರಿಸಲಡಗುವುದೀ ಕುರೂಪಿತನ ೧೮

ನಿನ್ನ ಹವಣೇಂ ಪೂರ್ವದಲಿ ಭಿ
ಕ್ಷಾನ್ನವನು ಬೇಡಿದನು ಪಶುಪತಿ
ಪನ್ನಗಾರಿಧ್ವಜನು ಕಾದನು ಪಶುಗಳಡವಿಯಲಿ
ಉನ್ನತೈಶ್ವರ್ಯಪ್ರದನು ಶತ
ಮನ್ಯು ಬನದಲಿ ನವೆಯನೇ ಸಾ
ಕಿನ್ನು ಮನನೋಯದಿರು ಚಿತ್ತೈಸೆಂದನುರಗಪತಿ ೧೯

ಪರಮ ಸತ್ಯವ್ರತದೊಳಾ ಪು
ಷ್ಕರನ ಗೆಲಿದುನ್ನತದ ರಾಜ್ಯದ
ಸಿರಿ ಮಿಗಿಲು ಸಾಮ್ರಾಜ್ಯವಾಳುವೆ ನಿನ್ನ ಸತಿಸಹಿತ
ವರವನಿತ್ತೆನು ನಿನಗೆಯೆಂದುಪ
ಚರಿಸಿ ಕಾರ್ಕೋಟಕನು ನಳನೃಪ
ಗರುಹುತಾಕ್ಷಣ ಮಾಯವಾದನು ರಾಯ ಕೇಳೆಂದ ೨೦

ಬಲಿದ ಚಿಂತೆಯ ಮನದ ದುಗುಡದ
ನಳನೃಪತಿ ಕಾನನದಿ ಬರುತಿರೆ
ಮಲೆತು ತೊಲಗದ ದುಷ್ಟಮೃಗಗಳ ಕಂಡು ನಸುನಗುತ
ಹಲವು ಗಿರಿ ಗುಹೆ ಗಹ್ವರಂಗಳ
ಕಳೆದು ಮುಂದಣ ಜನಪದಂಗಳ
ಬಳಿವಿಡಿದು ನಡೆತಂದನಲಸದೆ ಹಲವು ಯೋಜನವ ೨೧

ಹರಿವ ನದಿಗಳ ವನ ತಟಾಕದ
ವರ ಕುಸುಮ ಮಲ್ಲಿಗೆಯ ಬನಗಳ
ಪುರದ ಪ್ರಾಂತ್ಯದೊಳೆಸೆವ ಕೆಂದಾವರೆಯ ಕೊಳಗಳನು
ಉರುತರದ ಮಂಟಪಗಳಿಂದುರೆ
ಮೆರೆವ ರಾಜ್ಯವ ಕಳೆದು ಮುಂದಕೆ
ಬರುತಯೋಧ್ಯಾಪುರವ ಕಂಡನು ನೃಪತಿ ಕೇಳೆಂದ ೨೨

ಹೊಳೆವ ಮಿಸುನಿಯ ರತ್ನನಿಚಯದ
ನೆಲೆಯ ಸೌಧಾಗ್ರದಲಿ ನೆರೆ ಪ್ರ
ಜ್ವಲಿಪ ಹೇಮದ ಕಲಶಗಳ ರವಿ ಚಂದ್ರಶಾಲೆಗಳ
ಲಲನೆಯರ ಗಾನದ ವಿನೋದದ
ಹಲವು ಗೋಪುರ ಶಿಖರದಗಣಿತ
ನೆಲೆಯ ವರ್ಣಿಸಲರಿದಯೋಧ್ಯಾಪುರವು ರಂಜಿಸಿತು ೨೩

ಬಂದು ಹೊಕ್ಕನು ಪುರವ ಮೆರೆವತಿ
ಚಂದವನು ನೆರೆ ನೋಡಿ ಮನದೊಳ
ಗಂದು ಕೊಂಡಾಡಿದನು ಋತುಪರ್ಣನ ಮಹಾಸಿರಿಯ
ತಂದುದೇ ವಿಧಿ ತನ್ನನಿಲ್ಲಿಗೆ
ಮಂದಭಾಗ್ಯನು ತಾನೆನುತ ಮನ
ನೊಂದು ನೆನೆದನು ವರಪುರಾಧಿಪ ಚೆನ್ನಕೇಶವನ ೨೪

ಕೇಳು ಧರ್ಮಜ ರತ್ನನಿರ್ಮಿತ
ದಾಲಯದ ಸೊಬಗಿನಲಿಯೋಲಗ
ಶಾಲೆಯಲಿ ಋತುಪರ್ಣನಿದ್ದನು ಸಿಂಹಪೀಠದಲಿ
ಸಾಲಮಕುಟದ ನೃಪರು ಭೂಸುರ
ಜಾಲ ಮಂತ್ರಿ ಪುರೋಹಿತರು ಗುಣ
ಶೀಲರುತ್ತಮ ಸತಿಯರಿಂದೆಸೆದಿರ್ದುದಾಸ್ಥಾನ ೨೫

ಇದು ಸಮಯ ತನಗೆಂದು ನಳನೃಪ
ಮುದದಿ ವೇಷದ ತಾಳ್ದು ಹರಿಯಂ
ದದಲಿ ಬಂದನು ಸಭೆಗೆ ಕಂಡನು ನೃಪಗೆ ಕೈಮುಗಿದು
ಸದಮಲಾಸ್ಥಾನದಲಿ ರಿಪುಭಟ
ಕದನಕಲಿಗಳು ಜೀಯೆನಲು ನಯ
ಹೃದಯದಲಿ ಬಿನ್ನೈಸಿದನು ಋತುಪರ್ಣ ಭೂಪತಿಗೆ ೨೬

ಅವನಿಪತಿ ಕೇಳ್ ನಿಮ್ಮ ಪದಕಮ
ಲವನು ಭಜಿಸುವೆ ಜೀಯ ಚಿತ್ತದಿ
ಸವಡಿನುಡಿಯೆನಗಿಲ್ಲ ಬಾಹುಕನೆಂಬುದಭಿಧಾನ
ಭುವನದೊಳು ತಾನಶ್ವಕುಲಹೃದ
ಯವನು ಬಲ್ಲೆನು ಶಾಕಪಾಕದಿ
ಸವಿಗೊಳಿಪ ಸೂವಾರವಿದ್ಯೆಯನರಿವೆ ತಾನೆಂದ ೨೭

ಸೂಪಕಾರ್ಯದೊಳಗ್ಗಳನು ಕಡು
ರೂಪಿನವ ತಾನಲ್ಲ ಚಿತ್ತದಿ
ಕಾಪುರುಷನೆನ್ನದಿರು ನೋಡಾ ತನ್ನ ಪೌರುಷವ
ಭೂಪ ಮುಂಗೈಕಂಕಣಕೆ ಕುಲ
ದೀಪ ಕನ್ನಡಿಯೇಕೆ ತರಿಸು ಪ್ರ
ತಾಪವಾಜಿಯನೆಂದು ಬಿನ್ನೈಸಿದನು ನಸುನಗುತ ೨೮

ಪೊಡವಿಪತಿ ಋತಪರ್ಣ ಬಾಹುಕ
ನುಡಿದ ವಚನಕೆ ಮೆಚ್ಚಿ ಮನದು
ಗ್ಗಡದ ತೇಜಿಯ ತರಿಸಿ ಕೊಡಲೇರಿದನು ಬೀದಿಯಲಿ
ಮಡದ ಸನ್ನೆಗೆ ಕುಣಿದುರವೆಗಾ
ರಿಡುತ ಜೋಡಣೆಯಿಂದ ಹಯವಡಿ
ಗಡಿಗೆ ಚಿಮ್ಮಿತು ವಾಯುವೇಗದೊಳರಸ ಕೇಳೆಂದ ೨೯

ಕರದ ವಾಘೆಯ ಸಡಿಲ ಬಿಡೆ ನಿ
ಬ್ಬರದ ಗಮನದೊಳೈದಿತೆವನಿಯೊ
ಳುರವಣಿಸಿ ಕೆಂಧೂಳಿ ಮುಸುಕಿದುದಂಬರವ ಬಿಡದೆ
ಧರಣಿ ತಲ್ಲಣಿಸಿದುದು ಗಗನದಿ
ಸುರರು ಕೊಂಡಾಡಿದರು ರಾವುತ
ರರಸನಹುದೋ ಭಾಪು ಭಾಪೆಂದುದು ಸಮಸ್ತಜನ ೩೦

ಮುರುಹಿ ಹಿಡಿಯಲು ಮಡದ ಸನ್ನೆಗೆ
ತಿರುಗತತಿ ವೇಗದಲಿ ಹಯವೋ
ಸರಿಸಿ ಕಿರುಚೆಮುರಿಡಲು ನಿಲಿಸಿದ ವಾರುವವನಿಳಿದು
ಕರವ ಮುಗಿಯಲು ನೃಪತಿ ಮೆಚ್ಚುತ
ತರಿಸಿ ಕೊಟ್ಟನು ಭೂಷಣಂಗಳ
ಹಿರಿದು ಸಂಬಳವಿತ್ತು ನಿಲಿಸಿದನರಸ ಬಾಹುಕನ ೩೧

## ೭. ಭೀಮನೃಪ ಕರಸಿದ ತನ್ನ ನಿಜಸುತೆಯ

ಅರಸ ಕೇಳಾ ಪುರದೊಳೊಬ್ಬರಿ
ಗರಿಯದಂದದಿ ನಳನಿರಲು ಭೂ
ಸುರರ ಮತದಲಿ ಕೇಳ್ದ ಭೀಮನೃಪಾಲನೀ ಹದನ
ಧರೆಯನೆಲ್ಲವ ಜೂಜಿನಲಿ ಪು
ಷ್ಕರಗೆ ನಳನೃಪ ಸೋತು ಅಡವಿಗೆ
ತರುಣಿ ಸಹ ಹೊರವಂಟನೆನೆ ಹೊರಳಿದನು ಶೋಕದಲಿ ೧

ಹಾ ಮಗಳೆ ದಮಯಂತಿ ನಿಷಧಸ
ನಾಮನನು ಕೈವಿಡಿದು ಬಾಳುವ
ನೇಮವನು ಬಿಸುಟಡವಿಗಟ್ಟಿತೆ ವಿಧಿವಿಕರ್ಮಫಲ
ಭೀಮನೃಪನುದರದಲಿ ಜನಿಸಿ ವಿ
ರಾಮವಾದುದೆ ನಿನ್ನ ಸಿರಿ ಮುಖ
ತಾಮರಸವನು ಕಾಣೆ ತೋರೆಂದರಸ ಹಲುಬಿದನು ೨

ಬಡವರುದರದೊಳುದಿಸಿ ಸುಖವನು
ಪಡೆಯಲೊಲ್ಲದೆ ಬಂದು ನೀನೀ
ಪೊಡವಿಪತಿಯುದರದಲಿ ಸಂಜನಿಸುವರೆ ಎಲೆ ತಾಯೆ
ಗಿಡುಮೆಳೆಗಳಾರಣ್ಯದಲಿ ತನು
ವಿಡಿದು ಸೈರಿಪುದೆಂತು ಮಗಳೇ
ಸುಡು ತನುವನಿದನೆಂದು ಮರುಗಿದಳವಳ ನಿಜಜನನಿ ೩

ಸತಿಪತಿಗಳೀ ಪರಿಯ ಶೋಕೋ
ನ್ನತಿಯ ಸೈರಿಸಲಾರದಾ ಮಾ
ರುತನ ಸಖನೊಳು ಪುಗುವೆವೆಂದುರವಣಿಸಿ ನಡೆತರಲು
ಕ್ಷಿತಿಪ ಕೇಳಾಕಸ್ಮಿಕದೊಳಾ
ಯ್ತು ತಿವಚನವಾಕಾಶದಲಿ ಪತಿ
ವ್ರತೆಗೆ ಹಾನಿಯೆ ಸುಖದೊಳಿಹಳೆಂದುದು ನಭೋನಿನದ ೪

ಎಂದ ವಾಕ್ಯವ ಕೇಳಿ ಭೂಸುರ
ವೃಂದದಲಿ ಮುನಿಯೋರ್ವ ನುಡಿದನು
ಸಂದ ಪರಮಾನಂದಜ್ಯೋತಿರ್ಮಯನ ವಾಕ್ಯವಿದು
ಇಂದುಮುಖಿ ದಮಯಂತಿ ನಳನೃಪ
ರೆಂದಿಗೂ ಸುಕ್ಷೇಮಿಗಳು ನೀ
ವಿಂದು ಕಳುಹಿಸಿ ಚರರ ಭೇದಿಸಲೆಂದನಾ ಮುನಿಪ ೫

ಎನಲು ಮುನಿಪನ ಮಾತಿನಲಿ ಅರ
ಮನೆಗೆ ಬಂದು ವಿಶಾಲಚಿಂತೆಯ
ಮನದೊಳಿರೆ ಇನನಿಳಿದನಸ್ತಾಂಬುಧಿಗೆ ವಹಿಲದಲಿ
ಜನಪನಾ ರಾತ್ರಿಯಲಿ ನಿದ್ರಾಂ
ಗನೆಯನುಳಿದಿರೆ ಪೂರ್ವಶೈಲದಿ
ದಿನಪ ತಲೆದೋರಿದನು ಹರೆದುದು ರಜನಿಯಾಕ್ಷಣಕೆ ೬

ಅರಸ ಕರಸಿದನಾಪ್ತರನು ಭೂ
ಸುರರಿಗೆಂದನು ನೀವು ಕರುಣದಿ
ಧರೆಯೊಳಿಲ್ಲಿಹಳೆನ್ನಸುತೆ ದಮಯಂತಿ ನಳನೃಪರ
ಇರವ ಕಾಂಬುದು ಕಂಡು ಕರೆತಂ
ದರಿಗೆ ಕೊಡುವೆನು ಧರೆಯೊಳರ್ಧವ
ನಿರುತವೆಂದುಪಚರಿಸಿ ಕಳುಹಿದ ಭೀಮನೃಪನವರ ೭

ಪುರನಗರ ವೀಧಿಗಳ ಮಧ್ಯದಿ
ನೆರೆದ ಸಭೆಯಲಿ ಮಾರ್ಗದಲಿ ಸಂ
ಚರಿಸುವವರನು ಕಂಡು ಕೇಳುತ ಬಂದರಲ್ಲಲ್ಲಿ
ಇರವ ಕಾಣದೆ ಬಳಲಿ ಚಿಂತಿಸಿ
ಮರುಗುತವನೀಸುರರು ಭೇದಿಸು
ತಿರಲು ಮೂವರು ಬೇರೆ ಹೊಕ್ಕರು ಚೈದ್ಯನಗರಿಯನು ೮

ಅಲ್ಲಿ ವಾರ್ತೆಯ ಕೇಳಿದರು ಭೂ
ವಲ್ಲಭನ ಕ್ರತುಸಮಯವೆಂದವ
ರೆಲ್ಲ ಗಮಿಸಲು ಕಂಡು ಮೂವರು ತಾವು ಅವರೊಡನೆ
ನಿಲ್ಲದೈದಿರರಮನೆಗೆ ತಮ
ಗಲ್ಲಿ ದಕ್ಷಿಣೆ ಮೃಷ್ಟ ಭೋಜನ
ವಲ್ಲಿ ಮಿಗಿಲಹುದೆನುತ ಹೊಕ್ಕರು ಯಜ್ಞಮಂಟಪವ ೯

ಜನಪನವನೀಸುರರ ಮಂತ್ರದೊ
ಳನಿಲಸಖನಾರಾಧಿಸಲು ನೃಪ
ತನುಜೆಯಾದ ಸುನೀತಿಯೊಳು ದಮಯಂತಿ ಭಾವಿಸುತ
ವನಿತೆಯಿರೆ ಕಂಡನು ಸುದೇವನು
ಮನದೊಳನುಮಾನಿಸಿದನೀ ಮಾ
ನಿನಿ ಮಹಾಸತಿಯೆನುತ ವಿಸ್ಮಯಗೊಂಡು ಮನದೊಳಗೆ ೧೦

ಮುಗಿಲು ಮುಸುಕಿದ ಚಂದ್ರಬಿಂಬವೊ
ಪಗಲೊಳೆಸೆವ ಸುದೀಪಕಾಂತಿಯೊ
ಹೊಗೆಯೊಳೆಸೆಯುವ ಚಿತ್ರಪ್ರತಿಮೆಯೊ ಹೇಳಲೇನವಳ
ಉಗಿದು ಬಿಸುಟ ವಿಭೂಷಣದ ವೈ
ಲಿಗೆ ಸೀರೆಯು ಮಲಿನ ತನು ಕಳೆ
ದೆಗೆಡು ಕೈಗಲ್ಲದಲಿ ನಿಂದಿರೆ ಕಂಡನಾಸತಿಯ ೧೧

ಇದು ಪತಿವ್ರತಧರ್ಮವಹುದೀ
ಸುದತಿ ತೊರೆದಿಹಳೆಲ್ಲವನು ನೃಪ
ವಧುವ ಕಾಣಿಸಿಕೊಂಬೆನೆಂದು ಸುದೇವ ನಡೆತಂದು
ಹದನಿದೇನೌ ತಾಯೆ ನಿಮ್ಮಯ
ವದನಕಮಲವು ಬಾಡಿ ಕಡು ಮಾ
ಸಿದ ವಸನದುಡಿಗೆಯಲಿ ನೀವಿಹುದೇನು ಪರಿಯೆಂದ ೧೨

ಇಂದುವದನೆ ವಿದರ್ಭಪಟ್ಟಣ
ದಿಂದ ಬಂದೆನು ತಾನು ಭೂಸುರ
ವಂದ್ಯನೆನ್ನಭಿಧಾನ ಕೇಳು ಸುದೇವನೆಂಬುವುದು
ಇಂದು ನಿಮ್ಮನು ನೋಡ ಕಳುಹಿದ
ತಂದೆ ಭೀಮನೃಪಾಲನಾತನ
ನಂದನೆಗೆ ತಾ ಸಖನು ಚಿತ್ತೈಸೆನ್ನ ಬಿನ್ನಪವ ೧೩

ಕ್ಷಿತಿಪ ಭೀಮನೃಪಾಲನಾತನ
ಸತಿಸುತರು ಬಾಂಧವ ಸಹೋದರ
ರತಿಶಯರು ನಿಮ್ಮಯ ಕುಮಾರರು ಕುಶಲರಿಂದಿನಲಿ
ಕ್ಷಿತಿಯನಗಲುತ ನಳನೃಪತಿ ನಿಜ
ಸತಿಸಹಿತ ವನಕೈದಿದುದ ಕೇ
ಳುತಲಿ ನಿಮ್ಮವರೆಲ್ಲ ಶೋಕಾಬ್ಧಿಯಲಿ ಮುಳುಗಿಹರು ೧೪

ಘೋರತರ ಶೋಕವನು ಸೈರಿಸ
ಲಾರದಾಸತಿಪತಿಗಳಿಬ್ಬರು
ಸೋರುತಿಹ ಕಂಬನಿಗಳಲಿ ಕರೆದೆಮ್ಮ ಕಳುಹಿದರು
ಧಾರಿಣಿಯೊಳರಸುತ್ತ ಬಂದೆವು
ವಾರಿಜಾನನೆ ನಿಮ್ಮ ಕಂಡೆವು
ಸೇರಿತೆಮ್ಮಯ ಪುಣ್ಯವೆಂದು ಸುದೇವ ಕೈಮುಗಿದ ೧೫

ವನಿತೆ ಕೇಳುತ ಶೋಕಜಲದಲಿ
ನೆನೆದು ಬುಧಕುಲತಿಲಕನನು ಬಾ
ರೆನುತ ಮನ್ನಿಸಿ ತನ್ನವರನಡಿಗಡಿಗೆ ಬೆಸಗೊಳಲು
ವನಿತೆ ನೋಡಿದಳಾ ಸುದೇವನ
ಜನನಿಗರುಹಲು ಬಂದಳಾ ವಿ
ಪ್ರನನು ನೀವಾರೆಂದು ಬೆಸಗೊಳೆ ನುಡಿದನಿಂತೆಂದು ೧೬

ಕೇಳು ತಾಯೆ ವಿದರ್ಭಪತಿ ಭೂ
ಪಾಲನಾತ್ಮಜೆ ಪತಿಯೊಡನೆ ತ
ನ್ನಾಲಯವನುಳಿದು ವನಕ್ಕೈದಿದಳೆನಲು ನೃಪ ಕೇಳಿ
ತಾಳಲಾರದೆ ನೋಡಿ ಕರತರ
ಹೇಳಿ ಕಳುಹಲು ಬಂದೆನಿಲ್ಲಿಗೆ
ಬಾಲೆ ದಮಯಂತಿಯಳ ಕಂಡೆನೆನುತ್ತ ಕೈಮುಗಿದ ೧೭

ಕೇಳಿ ಶಿವಶಿವಯೆನುತ ಶೋಕವ
ತಾಳಿ ತೆಗೆದಪ್ಪಿದಳು ಮಗಳೆ ವಿ
ಟಾಳಿಸಿತೆ ನಿಜರಾಜ್ಯಸಿರಿ ನಿನಗಿಂತು ಬಲುವ್ಯಥೆಯ
ಭಾಳದಲಿ ವಿಧಿ ಬರೆದನೇ ಜನ
ಪಾಲ ನಳನೃಪನೆತ್ತ ಸರಿದನೊ
ಕಾಲಗತಿಯಿಂತಾದುದೇ ಹಾ ಎನುತ ಮರುಗಿದಳು ೧೮

ಬಾಲೆ ಬಿಡು ಶೋಕವನು ಭೀಮನೃ
ಪಾಲನರಸಿಗೆ ತಂಗಿ ತಾ ತ
ನ್ನಾಲಯದಿ ಕಡುನೊಂದೆ ಮಗಳೇ ಸಾಕು ನಮ್ಮೊಡನೆ
ಪೇಳದಿಹರೆ ಸುನಂದನಿಗೆ ಸಮ
ಪಾಳಿ ನೀನೆಮಗೆಂದು ತಳ್ಕಿಸಿ
ಪಾಲಿಸಿದಳತಿಕರುಣದಲಿ ದಮಯಂತಿಯನು ಜನನಿ ೧೯

ಕಿರಿಯ ತಂದೆ ಸುಬಾಹು ಮರುಗಿದ
ವರಕುವರಿ ದಮಯಂತಿ ನಿನ್ನಯ
ಪುರುಷನಿಲ್ಲದೆ ಚಿಂತೆಯಿಂದೆಲ್ಲವನು ನೀ ತೊರೆದು
ಕರಗಿ ಕಂದಿದೆ ಮಗಳೆ ತಾನಿಂ
ತರಿದುದಿಲ್ಲಕಟಕಟ ಪುರುಷನ
ಕರಸಿ ಕೊಡಿಸುವೆನಿದಕೆ ಚಿಂತಿಸಬೇಡ ಬಾರೆಂದ ೨೦

ತರಳೆ ಬಾರೆಂದೆನುತ ಕಣ್ಣಿನೊ
ಳೊರೆವ ಕಂಬನಿಗಳನು ಸೆರಗಿನೊ
ಳೊರೆಸಿ ದಮಯಂತಿಯನು ಮನ್ನಿಸಿ ಬಂದನೋಲಗಕೆ
ಕರಸಿದನು ಭೂಸುರ ಸುದೇವನ
ನಿರುಪಮಿತಭೂಷಣಗಳಿಂದುಪ
ಚರಿಸಿ ಕಳುಹಲು ಬಂದ ಭೀಮನೃಪಾಲನೋಲಗಕೆ ೨೧

ಅರಸ ಕೇಳು ವಿದರ್ಭಪತಿ ಮನ
ಮರುಗುತಿರಲಾ ಸಮಯದಲಿ ಭೂ
ಸುರ ಸುದೇವನು ಬಂದು ಕೈಮುಗಿದೆಂದನೀ ಹದನ
ಅರಸುತೆಲ್ಲೆಡೆ ಹೋಗಿ ನಾನಾ
ಪುರವರಂಗಳ ಕಳೆದು ಚೈದ್ಯನ
ಪುರವ ಹೊಕ್ಕೊಡನಲ್ಲಿ ಕಂಡೆವು ನಿನ್ನ ನಂದನೆಯ ೨೨

ಕಂಡು ಮಾತಾಡಿದೆನು ಸತಿಯಳ
ಮಂಡೆ ಮಾಸಿದೆ ಮಲಿನ ವಸನದ
ಗಂಡನಗಲಿದ ಚಿಂತೆಯಲಿ ಮುಖ ಬಾಡಿ ದೇಹವನು
ದಂಡಿಸಿದಳನ್ನದಲಿ ಮನ ಮುಂ
ಕೊಂಡುದಾ ಸತಿಗಿನಿಯನನು ನೆರೆ
ಕಂಡು ಹೇಳುವರಾರೆನುತ ಮರುಗುವಳು ಮನದೊಳಗೆ ೨೩

ಕೇಳುತರಸನ ವದನಕಾಂತಿ ವಿ
ಶಾಲವಾದುದು ಮನದಿ ಹರುಷವ
ತಾಳಿ ಹೊಂಪುಳಿವೋಗಿ ಭೀಮನೃಪಾಲ ಕರಸಿದನು
ಬಾಲೆಯರ ತನ್ನಾಪ್ತ ಸಚಿವರ
ಮೇಳದಲಿ ನಿಜಸುತೆಯ ಕರತರ
ಹೇಳಿ ರತ್ನಾಭರಣಗಳನಿತ್ತವರ ಕಳುಹಿದನು ೨೪

ಬಂದರಲ್ಲಿಗೆ ಚೈದ್ಯನೃಪತಿಯ
ನಂದು ಕಾಣಿಸಿಕೊಂಡನವರನು
ಮಂದಿರದ ಸುಕ್ಷೇಮವನು ಕೇಳಿದರೆ ಪೇಳಿದರು
ಇಂದುಮುಖಿ ದಮಯಂತಿಯನು ಕಳು
ಹೆಂದು ಭೀಮನೃಪಾಲ ಹರುಷದೊ
ಳಿಂದು ನಿಮಗುಡುಗೊರೆಗಳನು ಕಳುಹಿದನು ಕೇಳೆಂದ ೨೫

ಅರಸ ಕೇಳು ಸುಬಾಹು ಭೂಪತಿ
ಕರಸಿದನು ಮಂತ್ರಿಗಳ ಭೀಮನ
ಪುರಕೆ ಪಯಣವ ಮಾಡಿದನು ದಮಯಂತಿಯನು ಕರೆದು
ತರುಣಿ ನೀ ನಮ್ಮಲ್ಲಿ ತಿಂಗಳು
ಹೊರೆದೆ ದೇಹವ ಕಷ್ಟದಲಿಯೆಂ
ದುರುತರದ ಪ್ರೇಮದಲಿ ಕೊಟ್ಟನು ಸಕಲ ಭೂಷಣವ ೨೬

ತರಿಸಿದನು ದಂಡಿಗೆಯೊಳಗೆ ಕು
ಳ್ಳಿರಿಸಿ ಸತಿಯರ ಗಡಣದಲಿ ಮಂ
ದಿರವ ಹೊರವಂಟರಸನೇರಿದ ಗಜದ ಕಂಧರವ
ಮೊರೆವ ವಾದ್ಯದ ರಭಸದಲಿ ಕರಿ
ತುರಗ ರಥ ಕಾಲಾಳ ಸಂದಣಿ
ಯುರವಣಿಸೆ ನಡೆತಂದು ಹೊಕ್ಕ ವಿದರ್ಭ ಪಟ್ಟಣವ ೨೭

ದೂತರೈದಿದರೊಸಗೆಯಲಿ ಜನ
ಜಾತ ನಲಿಯಲು ಬಂದು ಬೇಗದಿ
ಭೂತಳೇಂದ್ರಗೆ ಕೈಮುಗಿದು ದಮಯಂತಿ ಬಂದಳೆನೆ
ಮಾತ ಕೇಳುತಲೆದ್ದು ಬಲಸಂ
ಗಾತಲೈತಂದವರ ಕಂಡತಿ
ಪ್ರೀತಿಯಿಂ ತಕ್ಕೈಸಿ ಕರೆತಂದನು ನಿಜಾಲಯಕೆ ೨೮

ಅವನಿಪತಿ ಕೇಳಾ ಪುರದೊಳು
ತ್ಸವವನದನೇನೆಂಬೆನಂದಿನ
ದಿವಸದೊಳಗರಮನೆಯೊಳಾ ದಮಯಂತಿಯನು ಜನನಿ
ತವಕದಿಂ ಬಿಗಿಯಪ್ಪಿದಳು ಬಾಂ
ಧವರು ಸಂತೋಷಿಸಿದನಿಬರು
ಯುವತಿಯರು ನಿಜ ತನಯರಾಗಿಲಿಂಗಿಸಿದರಂಗನೆಯ ೨೯

ಮಗನ ನೋಡಿದಳಿಂದ್ರಸೇನನ
ತೆಗೆದು ತಕ್ಕೈಸಿದಳು ಕರೆದಳು
ಮಗಳ ಚಂದ್ರಾಸ್ಯವನು ತೊಡೆಯೊಳಗಿಟ್ಟು ಮಮತೆಯಲಿ
ಮೊಗವನೀಕ್ಷಿಸಿ ಮೊಲೆಗಳಲಿ ತೊರೆ
ದುಗುವ ಹಾಲಿನ ಜನನಿ ಮಿಗೆ ನೀ
ರೊಗುವ ಕಣ್ಣೀರಿನಲಿ ಸಂತೈಸಿದಳು ನಿಜಸುತರ ೩೦

ಕಂತುಪಿತನೊಲುಮೆಯಲಿ ಧರಣೀ
ಕಾಂತ ಭೀಮನೃಪಾಲ ಬಾಂಧವ
ಸಂತತಿಯನಾದರಿಸಿ ಕಳುಹಿದನವರನುಚಿತದಲಿ
ಸಂತತವು ನಿಜಪತಿಯನಗಲಿದ
ಚಿಂತೆಯಲಿ ಮನಗುಂದಿದಳು ದಮ
ಯಂತಿ ನೆನೆಯುತ್ತಿರ್ದಳಾ ವರಪುರದ ಚೆನ್ನಿಗನ ೩೧

## ೮. ದಮಯಂತಿಯನು ಕೂಡಿದನು ನಳನೃಪತಿ

ಕೇಳಿದೈ ರಾಜೇಂದ್ರ ಧರ್ಮನೃ
ಪಾಲ ತೊರೆದಳು ಸಕಲ ವಿಭವವ
ಧೂಳಿ ಮುಸುಕಿದ ಮಲಿನ ವಸನದ ಮಗಳ ತಾ ನೋಡಿ
ಕೇಳಿದಳು ಪೂರ್ವೋತ್ತರವ ಭೂ
ಪಾಲನವನಿಯನುಳಿದು ನಿನ್ನ ವ
ನಾಲಯದೊಳೆಂತಗಲಿದನು ಪೇಳೆಂದಳಾ ಜನನಿ ೧

ಕಪಟದಲಿ ರಾಜ್ಯವನು ಪುಷ್ಕರ
ನಪಹರಿಸಿ ಜೂಜಿನೊಳು ನಳ
ನೃಪತಿ ಸೋತಾರಣ್ಯಕೈದಿದನೊಂದುವಸ್ತ್ರದಲಿ
ಗುಪಿತದಿಂ ಬರೆ ಮುಂದೆ ಪಕ್ಷಿಗ
ಳುಪಮೆಯಲಿ ಕೊಂಡೊಯ್ಯೆ ವಸನವ
ಕೃಪಣತನದಲಿ ತನ್ನ ಸೀರೆಯೊಳೊಯ್ದನರ್ಧವನು ೨

ಮರೆದು ಮಲಗಿದೆ ರಾತ್ರೆಯಲಿ ಎ
ಚ್ಚರಿಸದೇ ನೃಪ ತೆರಳಿದನು ಕಾ
ತರಿಸಿ ಕಂಬನಿಯೊಳಗೆ ಬಂದೆನು ಚೈದ್ಯನಗರಿಯಲಿ
ಕರುಣಿ ಚಿಕ್ಕಮ್ಮನಲಿ ತಿಂಗಳು
ಹೊರೆದೆನೀ ದೇಹವನು ಇಲ್ಲಿಗೆ
ಕರಸಿದಿರಿ ನೀವೆನುತ ಕಂಬನಿದುಂಬಿದಳು ತರಳೆ ೩

ಪತಿವಿಹೀನೆಗೆ ಸಲುವುದೇ ಸು
ವ್ರತ ಸುಭೋಜನ ಸೌಖ್ಯ ಸುಖ ಸ
ದ್ಗತಿಗಳುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸತಿಯರಿಗೆ ಪತಿದೈವವೆಂದಾ
ಶ್ರುತಿ ವಚನವಾಡುವುದು ತನಗಾ
ಪತಿಯನಗಲಿದ ಬಳಿಕ ಗತಿಯಿಲ್ಲೆಂದಳಿಂದುಮುಖಿ ೪

ಧರೆಯೊಳೆಲ್ಲಿಹನೋ ವಿಚಾರಿಸಿ
ಕರಸಿಕೊಡು ಎಲೆ ತಾಯೆ ಎನ್ನಯ
ಪುರುಷನಿಲ್ಲದ ಬಳಿಕ ಬಿಡುವೆನು ತನುವನೆಂದೆನಲು
ಮರುಗಿದಳು ಮಗಳೆಂದ ಮಾತಿಗೆ
ಕರೆದು ಕಂಬನಿ ತೊಡೆದು ತನ್ನಯ
ಪುರುಷನೊಡನಿಂತೆನಲು ಭೀಮನೃಪಾಲ ಚಿಂತಿಸಿದ ೫

ಅರಸ ಕೇಳು ವಿದರ್ಭ ಪುರಪತಿ
ಕರಸಿದನು ಭೂಸುರರನವರಿಗೆ
ಪರಮ ವಸ್ತುವನಿತ್ತು ಕಳುಹಿದ ನಿಷಧಪತಿಯಿರವ
ಶರಧಿ ಮೇರೆಯೊಳೆಲ್ಲ ಭೇದಿಸಿ
ಕರೆದು ತಾರೆನಲವರು ಬರುತಿರೆ
ಕರಸಿದಳು ದಮಯಂತಿಯವರೊಡನೆಂದಳೀ ಮಾತ ೬

ನಳನೃಪತಿ ನಿಜರಾಜತೇಜವ
ನುಳಿದು ತಾ ಪ್ರತಿರೂಪು ತಾಳಿಹ
ನಿಳೆಯೊಳಗ್ಗದ ಸಭೆಯೊಳಗೆ ನೀವೆಂಬುದೀ ನುಡಿಯು
ಹಳುವದಲಿ ಸತಿಯುಟ್ಟ ಸೀರೆಯು
ಸೆಳೆಯುತರ್ಧವ ಕೊಂಡು ನಾರಿಯು
ಕಳೆದು ಹೋದವರುಂಟೆಯೆನಲುತ್ತರವ ಪೇಳುವನು ೭

ಆ ನುಡಿಯ ತಂದೆನಗೆ ನೀವನು
ಮಾನವಿಲ್ಲದೆ ಪೇಳೆನುತ ಸ
ನ್ಮಾನದಲಿ ಬೀಳ್ಕೊಟ್ಟಳಂಗನೆ ತೆರಳಿದರು ಬಳಿಕ
ಮಾನವೇಂದ್ರರ ಸಭೆಯ ನೋಡಿ ನಿ
ಧಾನಿಸುತ ನಾನಾದಿಗಂತ
ಸ್ಥಾನದಲಿ ನಗರಗಳ ಭೇದಿಸುತ್ತೈದಿದರು ಪಥವ ೮

ಇಳಿಯಮರರಲ್ಲಲ್ಲಿ ಗಿರಿ ವನ
ಗಳ ನಿರೀಕ್ಷಿಸಿ ಕೆಲವು ಋಷಿಗಳ
ನಿಳಯಗಳ ನೋಡುತ್ತ ಕಾನನಗಳೆದು ಬೇಗದಲಿ
ಜಲಧಿಮೇರೆಯ ಮಧ್ಯದಲಿ ಭೂ
ವಳಯವೆಲ್ಲವ ಶೋಧಿಸುತ ತನು
ಬಳಲಿಕೆಯ ಭಾವಿಸದೆ ನಡೆದರು ಮುಂದೆ ಪಥವಿಡಿದು ೯

ಮುಂದೆ ಬರುತಿರೆ ಕಂಡರೊಬ್ಬನ
ಸಂದಯಾಚಕ ಭೂಸುರನನೆ
ಲ್ಲಿಂದ ಬಂದಿರಿಯೆನಲಯೋಧ್ಯಾನಗರಿಯಿಂದೆನಲು
ಕುಂದದಲ್ಲಿ ವಿಶೇಷವೇನುಂ
ಟೆಂದೆನಲು ಪೇಳಿದನು ತಾನೊಲ
ವಿಂದ ವಿಪ್ರನ ಮಾತಿನಿಂದೈದಿದರಯೋಧ್ಯೆಯನು ೧೦

ಮರುದಿವಸ ಋತುಪರ್ಣ ಮುನಿಮು
ಖ್ಯರು ಸಹಿತ ಓಲಗದೊಳಿರೆ ಕಂ
ಡರು ಮಹಾ ಸಭೆಯೊಳಗೆ ಹೊಕ್ಕರು ನಿಂದು ಕೈ ನೆಗಹಿ
ಹಿರಿಯರಿದೆ ಸಾಮಾಜಿಕರು ಸ
ಚ್ಚರಿತರಿದೆಲಾ ಕೇಳಿ ನೀವೆಂ
ದುರುತರದ ಗಂಭೀರವಾಕ್ಯದೊಳೆಂದನಾ ವಿಪ್ರ

ಹಳುವದಲಿ ಬಂದಲಸಿ ಮಲಗಿದ
ಕುಲಸತಿಯ ವಸನದೊಳಗರ್ಧವ
ಕಳಿದುಕೊಂಡೊಯ್ದಗಲಿ ಹೋದವರುಂಟೆ ರಾತ್ರಿಯಲಿ
ಇಳೆಯನಾಳುವ ನೃಪರ ಸತ್ಯದ
ಬಳಕೆಗಿದು ಲೇಸಲ್ಲವೆನೆ ಮನ
ವಳುಕಿ ನಸುನಗೆಯಿಂದ ನುಡಿದನು ಒಲಿದು ಬಾಹುಕನು ೧೨

ಕ್ಷಿತಿಯಮರರೆಲ್ಲಿಂದ ಬಂದಿರಿ
ಸತಿಯನಗಲಿದ ಬಾಹಿರನು ನಿಜ
ಪತಿಯೆ ಸಾಕಂತಿರಲಿ ಬಿಡು ಋತುಪರ್ಣನೋಲಗದಿ
ಅತಿಶಯದ ನುಡಿಗೇಳ್ದವಕಟಾ
ಸತಿಗೆ ವಂಚನೆಯಲ್ಲವದು ನಿಜ
ಪತಿಗೆ ಕೊರತೆಯದೆಂದು ಸೂಚಿಸಿ ನುಡಿದ ವಿಪ್ರಂಗೆ ೧೩

ಈತನಾರು ಕುರೂಪಿ ನೈಷಧ
ನೀತನೋ ಸಭೆಯೊಳಗೆ ತಾನೀ
ಮಾತನಾಡಲದೇಕೆ ಸಂಶಯವೇನು ಮನದೊಳಗೆ
ಖ್ಯಾತರಾಳೋಚಿಸುತ ಬಂದರು
ಭೂತಳಾಧಿಪ ಭೀಮನೃಪಸಂ
ಜಾತೆಯನು ಕಂಡೆರಗಿ ಕೈಮುಗಿದೆಂದರೀ ಹದನ ೧೪

ದೇವಿಯರು ಚಿತ್ತೈಸುವುದು ಭುವ
ನಾವಳಿಗಳೆಲ್ಲವನು ಸೋಡಿದು
ನಾವು ಮುಂದೈತರಲು ಕಂಡೆವಯೋಧ್ಯನಗರಿಯನು
ಭೂವರನ ಋತುಪರ್ಣರಾಯನ
ಸೇವೆಯಲಿ ಕುರೂಪಿಯೋರ್ವನು
ಜೀವಸಖನಾತಂಗೆ ಬಾಹುಕನೆಂಬ ನಾಮದಲಿ ೧೫

ತುರಗ ನಿಕರದ ಶಿಕ್ಷೆಯಲಿ ಮಂ
ದಿರದ ಬಾಣಸಿತನದ ಕೆಲಸದಿ
ನೆರೆ ನಿಪುಣನೆಂದೆನಿಸಿಕೊಂಡಿಹ ನೃಪನ ಸಭೆಯೊಳಗೆ
ಪರುಠವಿಸಿ ನೀವೆಂದ ಮಾತನು
ವರಸಭಾ ಮಧ್ಯದಲಿ ನುಡಿಯಲು
ಇರದೆ ತಾನೀ ಮಾತನೆಂದನು ನಗುತ ಬಾಹುಕನು ೧೬

ಸತಿಗೆ ವಂಚನೆಗೈದ ಪತಿ ತಾ
ವಿಕಳಮತಿಯಂತಿರಲಿ ಭೂಸುರ
ಪತಿಯೆ ಕೇಳಾ ಸತಿಗೆ ಭಂಗವೆ ಪತಿಗೆ ಕೊರತೆ ಕಣ
ಪತಿವ್ರತವನಾಚರಿಸುವಳು ನಿಜ
ಪತಿಯ ಗುಣದೋಷಗಳನೆಣಿಪಳೆ
ಗತಿಗೆ ಕಾರಣ ಸತ್ಯವೇ ಸತಿಗೆಂದವನ ನಗುತ ೧೭

ಎನಲು ತಲೆದೂಗಿದಳು ಈ ಮಾ
ತಿನಲಿ ಸಂಶಯವಿಲ್ಲದಿಹುದೆಂ
ದೆನುತ ಕಂಬನಿದುಂಬಿದಳು ದಮಯಂತಿ ಮನದೊಳಗೆ
ಇನಿಯನಹುದಾತನ ಪರೀಕ್ಷೆಗೆ
ನೆನೆಯಬೇಕೊಂದನುವನೆಂದಾ
ವನಿತೆ ತಂದೆಯನುಜ್ಞೆಯಲಿ ಕರೆದಳು ಸುದೇವನನು ೧೮

ಇಳೆಯಮರ ಬಾರೆಂದು ವಿವರವ
ತಿಳುಹಿ ಪಯಣವ ಮಾಡಿ ಕಳುಹಲು
ಹೊಳಲ ಹೊರವಂಟನು ಸುದೇವನು ಹಲವು ಯೋಜನವ
ಕಳೆದು ಬರುತಿರೆ ಮುಂದೆ ಕಂಡನು
ಲಲಿತ ರತ್ನಪ್ರಭೆಯ ಗೋಪುರ
ಹೊಳೆವಯೋಧ್ಯಾಪುರವನೀಕ್ಷಿಸಿ ಹೊಕ್ಕನರಮನೆಯ

ಇಟ್ಟ ಫಣೆಯೊಳಗೆಸೆವ ಮಟ್ಟೆಯು
ತೊಟ್ಟ ಹೊಸ ಯಜ್ಞೋಪವೀತದ
ಕಟ್ಟೆಯಿರುಕಿದ ಕಕ್ಷಪಾಳದ ಬೆರಳ ಜಪಸರದ
ಉಟ್ಟ ಭಾಸುರ ಬಳಲುಗಚ್ಚೆಯು
ಸೃಷ್ಟಿಗಚ್ಚರಿ ರೂಪಿನಲಿ ಪರ
ಮೇಷ್ಠಿಯಂದದಿ ಬಂದನವ ಋತುಪರ್ಣನೋಲಗಕೆ ೨೦

ಆರು ನೀವೆಲ್ಲಿಂದ ಬಂದಿರಿ
ದೂರದೇಶದ ಮಹಿಮರಿಳೆಯೊಳು
ಕಾರಣಗಳೇನುಂಟು ಅಲ್ಲಿ ವಿಶೇಷವೇನೆನಲು
ಭೂರಮಣ ಕೇಳವನಿಯಲಿ ಸಂ
ಚಾರಿಸುತ ಬಂದೆವು ವಿದರ್ಭಕೆ
ಭೂರಿನೃಪರೈತರುತಲಿದೆ ಚತುರಂಗ ಬಲಸಹಿತ ೨೧

ದೇಶ ದೇಶದ ಯಾಚಕರು ಧರ
ಣೀಶರುನ್ನತ ತುರಗ ಗಜ ರಥ
ಭೂಸುರರು ಮಂತ್ರಿಗಳು ದೈವಜ್ಞರು ಸುಗಾಯಕರು
ಭಾಸುರದ ತೇಜದಲಿ ಜನಸಂ
ತೋಷದಲಿ ನಡೆತರುತಲಿದೆ ಹರಿ
ವಾಸುದೇವನೆ ಬಲ್ಲ ದಮಯಂತಿಯ ಸ್ವಯಂವರವ ೨೨

ಶಯನದಲಿ ಮಲಗಿದ ಸತಿಯನಡ
ವಿಯಲಿ ನಳನೃಪನಗಲಿ ಹೋದನು
ನಯವಿಹೀನಳಿಗಾಗಿ ರಚಿಸಿದರಾ ಸ್ವಯಂವರವ
ಪಯಣ ನಿಮಗುಂಟೇಗಳೆನೆ ನೃಪ
ಬಯಸಿ ಹೆಣ್ಣಿನ ಮೋಹದಲಿ ವಾ
ಜಿಯ ವರೂಥಕೆ ಹೂಡ ಹೇಳಿದ ಕರೆಸಿ ಬಾಹುಕನ ೨೩

ಹೈ ಹಸಾದವೆನುತ್ತ ವಂದಿಸಿ
ಬಾಹುಕನು ಮಂದಿರಕೆ ಬಂದು ವಿ
ವಾಹವುಂಟೇ ಮರಳಿ ದಮಯಂತಿಗೆ ಜಗನ್ನಾಥ
ಈ ಹದನವಾರಿಂದಲಾದುದೊ
ದ್ರೋಹಿಯಾ ದಮಯಂತಿ ಇದು ಸಂ
ದೇಹವಾಗಿದೆಯೆನುತ ಚಿಂತಿಸಿ ಬಂದನರಮನೆಗೆ ೨೪

ಛಾಯದೊಳಗುತ್ತಮದ ತೇಜಿಯ
ನಾಯ್ದು ಹೂಡಿದ ರಥಕೆ ಸೇರಿಸಿ
ವಾಯುವೇಗದ ತೇರ ನಿಲಿಸಿದ ತಂದು ನೃಪನೆಡೆಗೆ
ರಾಯನೇರಲು ಕರಿತುರಗರಥ
ಪಾಯದಳ ಸಂದಣಿಸಿದುದು ನೆಲ
ಬಾಯ ಬಿಡೆ ಹೊರಹೊಂಟ ನೃಪ ಘನವಾದ್ಯರಭಸದಲಿ ೨೫

ಜನಪನೆಂದನು ಬಾಹುಕಗೆ ಮಾ
ನಿನಿಯನೀಕ್ಷಿಸಬೇಕು ನಿಲ್ಲದು
ಮನವಿದೊಂದೇ ದಿನಕೆ ನಡಸು ವಿದರ್ಭಪುರವರಕೆ
ಎನಲು ನಕ್ಕನು ಮನದೊಳಗೆ ತ
ನ್ನಿನಿಯಳಿಗೆ ವಿಧಿ ಬರೆದನೇ ಶಾ
ಸನವ ಮೀರುವರಾರೆನುತ ಮರುಗಿದನು ನಳನೃಪತಿ ೨೬

ಕರದ ವಾಘೆಯ ಸಡಿಲ ಬಿಡೆ ಮುಂ
ಬರಿದು ಚಿಮ್ಮಿದವಡಿಗಡಿಗೆ ರಥ
ತುರುಗ ಹಾಯ್ದುದು ತೇರು ಮುಂದಕೆ ಪವನ ವೇಗದಲಿ
ಭರದೊಳೈತರೆ ನೃಪನ ಹಚ್ಚಡ
ಧರೆಗೆ ಬೀಳಲು ಸಾರಥಿಯನೆ
ಚ್ಚರಿಸಿದನು ಋತುಪರ್ಣನಿದಕಿನ್ನೇನು ಹದನೆನುತ

ಜೀಯ ಚಿತ್ತೈಸುರವಣಿಸಿ ನಿ
ದಾ೯ಯದಲಿ ಹಿಂದುಳಿದುದಂಬರ
ವಾಯುಗತಿಯಲಿ ದಾಂಟಿ ಬಂದೆವು ಹಲವು ಯೋಜನವ
ಹೋಯಿತಾ ಮಾತೇಕೆ ನಡೆಯೆನೆ
ರಾಯ ಮೆಚ್ಚಿನ ಸಾರಥಿಯು ಬಿರು
ದಾಯಕನು ನೀನೆಂದು ಕೊಂಡಾಡಿದನು ಬಾಹುಕನ ೨೮

ಮುಂದೆ ಕಂಡನು ಬರುತಲಡವಿಯೊ
ಳೊಂದು ತಾರೆಯ ಮರನನದರೊಳು
ಸಂದ ಫಲಪರ್ಣಂಗಳೆಣಿಸದೆ ಸೂತ ಪೇಳೆನಲು
ಇಂದೆನಗೆ ಮತಿದೋರದವನಿಪ
ಕುಂದದೆನಗಿದ ಪೇಳು ನೀನೆನ
ಗೆಂದಡಾ ಸಾರಥಿಗೆ ಲೆಕ್ಕವನರುಹಿದನು ನೃಪತಿ ೨೯

ಇಳಿದು ರಥವನು ಬಂದು ವೃಕ್ಷದ
ಬಳಿಗೆ ನಿಂದಾ ಶಾಖೆಗಳಲಿಹ
ಫಲವದರ ಪರ್ಣಂಗಳೆಣಿಸಿದ ಪದ್ಮಸಂಖ್ಯೆಯಲಿ
ಒಲಿದು ಲೆಕ್ಕವ ಕಂಡು ತಾ ಮನ
ನಲಿದು ನಳನೃಪ ಪುಷ್ಕರನ ತಾ
ಗೆಲುವ ಹದನಾಯ್ತೆನುತ ಬರೆ ಕಲಿ ಪುರುಷನಿದಿರಾದ ೩೦

ಎಲೆ ನೃಪಾಲಕ ನಿನ್ನ ಸತ್ಯದ
ನೆಲೆಯನೀಕ್ಷಿಸಬೇಕೆನುತ ಬಂ
ದಳಲಿಸಿದೆ ಹಿರಿದಾಗಿ ನೋಯದಿರಿನ್ನು ಚಿತ್ತದಲಿ
ತೊಲಗಿದೆನು ಇಂದಿನಲಿ ಶುಭ ಮಂ
ಗಳಕರವು ನಿನಗಪ್ಪುದೆನಲಾ
ನಳನೃಪತಿ ಖತಿಗೊಂಡು ಶಾಪವ ಕೊಡದೆ ಮನ್ನಿಸಿದ ೩೧

ಮಾನವಾಧಿಪ ಕೇಳು ಲೋಕಕೆ
ದೀನಜನ ಬಾಂಧವನು ನಳನೃಪ
ಕಾನನದೊಳವನತ್ತ ಕಳುಹಿಸಿ ಬಂದು ರಥವೇರಿ
ಆ ನರೇಂದ್ರಂಗಶ್ವಹೃದಯವ
ತಾನರುಹಿ ಆತನಲಿ ಪಡೆದನು
ಸಾನುರಾಗದಿ ಭೂರುಹದ ಹೃದಯವನು ನಿಮಿಷದಲಿ ೩೨

ಕರದ ವಾಘೆಯ ಕೊಂಡು ನೃಪಗೆ
ಚ್ಚರಿಸಿ ನೂಕಿದ ತೇಜಿಗಳ ಹೂಂ
ಕರಿಸಿ ಮನ ಮುಂಕೊಂಡು ಹಾಯ್ದುದು ಬಿಟ್ಟ ಸೂಠಿಯಲಿ
ಭರದ ಗಮನವನೇನನೆಂಬೆನು
ನೆರೆದ ಜನವಲ್ಲಲ್ಲಿ ನಿಂದುದು
ಹರಹರಾ ಸಾರಥಿಗೆ ಸರಿಯಾರರಸ ಕೇಳೆಂದ ೩೩

ತುರಗ ಹೇಷಾರವದ ಗಾಲಿಯ
ಧುರಧುರದ ಚಿತ್ಕೃತಿಯ ಸಾರಥಿ
ಯುರವಣೆಯ ರಥದಚ್ಚುಗಳ ಝೇಂಕಾರದ ನಾದದಲಿ
ಭರದಿ ಕೆಂದೂಳಿಡುತ ಬರಲಾ
ಪುರಜನರು ಸಂದಣಿಸಿ ನೋಡಲು
ಪರಿಚರರು ಬಂದಾ ವಿದರ್ಭನೃಪಾಲಗರುಹಿದರು ೩೪

ಬಂದನೇ ಋತುಪರ್ಣನೆನುತಾ
ನಂದದಿಂ ಕರಸಿದನು ಸಚಿವರ
ಮುಂದಿಯನು ಕಳುಹಿಸಲು ಕರೆತಂದಗು ನಿಜಾಲಯಕೆ
ಸಂದಣಿಯ ಪರಿಹರಿಸಿ ನೃಪ ಮುದ
ದಿಂದ ಬೇರರಮನೆಯೊಳುಳುಪೆಗ
ಳಿಂದಯೋಧ್ಯಾಪತಿಯ ಸತ್ಕರಿಸಿದನು ಭೀಮನೃಪ ೩

ಕೇಳಿದಳು ದಮಯಂತಿ ವಾರ್ತೆಯ
ತಾಳಿದಳು ಹರುಷವನು ಮನದಲಿ
ಭಾಳಲೋಚನನಿಂದ ಫಲಿಸಿತು ಪುಣ್ಯವೆನಗಿಂದು
ಬಾಲೆ ಕೇಳೆನೆಗಿಂದು ಶೋಕ
ಜ್ವಾಲೆ ಪರಿಹರವಾಯ್ತು ಮಂಗಳ
ದೇಳಿಗೆಯು ಪಸರಿಸಿತು ಶುಭಕರವೆಂದಳಿಂದುಮುಖಿ ೩೬

ಓಲಗವನಿತ್ತನು ವಿದರ್ಭನೃ
ಪಾಲ ಕರಸಿದ ಮಂತ್ರಿ ಬಾಂಧವ
ಜಾಲವನು ಋತುಪರ್ಣ ಬಂದನು ಬಾಹುಕನು ಸಹಿತ
ಸಾಲಮಣಿ ಪೀಠದಲಿ ಕುಳ್ಳಿರೆ
ಬಾಲೆಯರ ಸಂಗೀತ ನೃತ್ಯದ
ಕೇಳ ಮೇಳದಿ ರಂಜಿಸಿತು ಭೂಪಾಲನಾಸ್ಥಾನ ೩೭

ಖಿನ್ನನಾದನು ಚಿತ್ತದಲಿ ಋತು
ಪರ್ಣ ಭೂಸುರನೆಂದ ಮಾತಿನ
ಬಿನ್ನಣಕೆ ಮರುಳಾಗಿ ಬಂದೆನು ಮೂಢನಾದೆನಲ
ಭಿನ್ನವಿಲ್ಲದೆ ಕೊಂಡ ನಾಚಿಕೆ
ಗಿನ್ನು ಹದನೇನೆನುತ ಗುಣಸಂ
ಪನ್ನ ಮರುಗಿದ ತನ್ನ ಮನದ ದುರಂತಚಿಂತೆಯಲಿ ೩೮

ನಾರಿಯರ ಮರೆಗೊಂಡು ಸಭೆಯಲಿ
ಸಾರಥಿಯ ಕುಬ್ಜಾವತಾರವ
ನೋರೆಗಣ್ಣಿನೊಳೀಕ್ಷಿಸುತ ದಮಯಂತಿ ಮನದೊಳಗೆ
ಆರಿವನು ನಳನೃಪನ ಪೋಲುವ
ಚಾರು ಚಿಹ್ನೆಗಳಿಲ್ಲ ತೋರ್ಕೆ ವಿ
ಕಾರವಾಗಿದೆ ರೂಪೆನುತ ಚಿಂತಿಸಿದಳಿಂದುಮುಖಿ ೩೯

ಒರೆದೊರೆದು ನೋಡಿದಳು ಸೂತನ
ಸಿರಿಮೊಗದ ಕಾಂತಿಯನು ಕಳೆಗುಂ
ದಿರುವ ಕಾಯುವ ಕಪ್ಪಿನಿಂದುದಿರ್ದ ರೋಮದಲಿ
ಪರಿಕಿಸಲ್ಕೀರೂಪು ಕೈಕೊಂ
ಡಿರುವನೇ ನಳನೃಪನು ಶಿವ ಶಿವ
ಮುರಹರನು ತಾ ಬಲ್ಲನೆಂದುಮ್ಮಳಿಸಿದಳು ತರಳೆ ೪೦

ಹರೆದುದೋಲಗವಲ್ಲಿ ನಿಜಮಂ
ದಿರಕೆ ಬಂದಾಲೋಚಿಸುತ ಮಿಗೆ
ತರುಣಿಯರ ಕಳುಹಿಸಲು ಬಂದರು ಬಾಣಸಿನ ಮನೆಗೆ
ಇರವ ಕಂಡರು ಪಾಕದಲಿ ಕೈ
ಕರಣವನು ನೆರೆ ಸೂಪಕಾರನ
ಪರಿಯ ಹೊಗಳುತ ಬಂದು ಬಿನ್ನೈಸಿದರು ಭಾಮಿನಿಗೆ ೪೧

ತಾಯೆ ಚಿತ್ತೈಸಿನ್ನವನ ಕರ
ಣಾಯತವನೇನೆಂಬೆ ಲೋಕದ
ಸ್ತ್ರೀಯರೊಳಗಿನಿತಿಲ್ಲ ರಚಿಸುವ ಶಾಕಪಾಕದಲಿ
ಮಾಯವಿದು ತಾ ತಿಳಿಯಲರಿಯದು
ಪಾಯದಿಂದೀಕ್ಷಿಸಲು ಸಕಲ ರ
ಸಾಯನವು ಪರಿಪಕ್ವವಾಗಿದೆ ಪೇಳಲರಿದೆಮಗೆ ೪೨

ದಾದಿಯರು ಬಾಹುಕನ ಗುಣಗಳ
ಭೇದಿಸಿದರೊಂದೊಂದು ಬಗೆಯ ತ
ಳೋದರಿಗೆ ಬಿನ್ನೈಸೆ ನಿಶ್ಚೈಸಿದಳು ದಮಯಂತಿ
ಆದಡವ ನಳನಹುದು ಗುಣದಲಿ
ಭೇದಿಸುವೆನಿನ್ನೊಮ್ಮೆಯೆನುತ ವಿ
ನೋದದಿಂದಾಡುವ ಕುಮಾರರ ಕರಸಿದಳು ತರುಣಿ

ತರಳರಿಗೆ ನೀರೆರೆದು ಕಾಂಚನ
ವರದುಕೂಲವ ತೊಡಿಸಿ ದಿವ್ಯಾ
ಭರಣ ಭೂಷಿತರಾದ ತನಯರ ದಾದಿಯರ ಕೈಯ್ಯ
ಪಿರಿದು ಕಳುಹಲು ಬಾಣಸಿನ ಮಂ
ದಿರದ ಬಾಗಿಲ ಮುಂದೆ ಬಿಡೆ ಸಂ
ಚರಿಸಿ ಸುಳಿದಾಡುವರ ಕಂಡನು ನೃಪತಿ ಹರುಷದಲಿ ೪೪

ತರಳರನು ಪಿಡಿದೆತ್ತಿ ತೊಡೆಯೊಳ
ಗಿರಿಸಿ ಮುದ್ದಾಡಿದನು ಮಕ್ಕಳ
ಸುರಿವ ಕಂಬನಿಗಳಲಿ ಬಾಹುಕ ಮರುಗುತಿರಲಂದು
ಮರೆಯ ಜಾಲಂಧ್ರದಲಿ ಕಂಡಳು
ತರುಣಿ ನಳ ನೃಪನೀತನಹುದೆಂ
ದುರುತರದ ಪ್ರೇಮದಲಿ ಬಂದಳು ಜನನಿಯರಮನೆಗೆ ೪೫

ತಾಯೆ ಸಂಶಯವಿಲ್ಲ ನೈಷಧ
ರಾಯನೀತನು ಸೂತನಲ್ಲ ವಿ
ಡಾಯದಲಿ ಬಂದಿಹನು ನೋಡು ಕುರೂಪಿವೇಷದಲಿ
ರಾಯರೊಳಗಗ್ಗಳೆಯ ನಳ ನೃಪ
ಮಾಯವನು ತೋರಿಹನು ಇವನ ನಿ
ಜಾಯತವ ನಾ ಬಲ್ಲೆ ಕರಸೆಂದಳು ಸರೋಜಮುಖಿ ೪೬

ಧರಣಿಪನ ಮತದಿಂದಲಾತನ
ಕರಸಿದಳು ನೃಪನರಸಿ ಬಾಹುಕ
ನಿರದೆ ಬಂದನು ರಾಜಮಂದಿರದಲ್ಲಿ ಕುಳ್ಳಿರಲು
ತರಳೆ ಮಾಸಿದ ಸೀರೆಯಲಿ ಗರ
ಗರಿಕೆ ತಪ್ಪಿದ ಚೆಲುವಿನಲಿ ನಿಂ
ದಿರಲು ಕಂಡನು ಸತಿಯ ತಲೆಬಾಗಿದನು ಲಜ್ಜೆಯಲಿ ೪೭



ಸುಳಿದಾಡುವರ ಕಂಡನು ನೃಪತಿ ಹರುಷದಲಿ

ಮುನ್ನ ಮಾಡಿದ ಕರ್ಮಫಲ ಋತು
ಪರ್ಣನಲಿ ಸೇವೆಯನು ಮಾಡುವು
ದುನ್ನತಿಕೆಯಲಿ ಬಂದುದೇ ನಿಮಗೆ ಸಾರ್ವಭೌಮರಿಗೆ
ತನ್ನ ಪುಣ್ಯದ ಹಾನಿ ತಾನಿದ
ಕಿನ್ನು ಮಾಡುವುದೇನು ಗುಣಸಂ
ಪನ್ನ ರಕ್ಷಿಸು ಸತಿಯನೆಂದೆರಗಿದಳು ಪದಯುಗಕೆ ೪೮

ತುರುಬ ಹಿಡಿದೆತ್ತಿದನು ಸತಿಯಳ
ಸುರಿವ ಕಂಬನಿ ತೊಡೆದು ನುಡಿದನು
ಬರಿದೆ ಚಿಂತಿಸಲೇಕೆ ಮಾನಿನಿ ಬಿಡು ಮನೋವ್ಯಥೆಯ
ಅರಿಯದವಳೇ ನೀನು ಲೋಕದ
ಸರಸಿಜಾಕ್ಷಿಯರೆಲ್ಲರಿಗೆ ನೀ
ಗುರುವಲಾ ಬರಿದೆನ್ನ ಬಯಸಲು ಬೇಡ ಹೋಗೆಂದ ೪೯

ವಿನಯಹೀನನು ತಾನು ಮನದಲಿ
ನೆನೆದು ತಪ್ಪಿದ ನಿರ್ದಯನು ಕಾ
ನನದಿ ನಿನ್ನನು ಬಿಸುಟು ಕಳೆದ ದುರಾತ್ಮ ಬಾಹಿರನ
ನೆನೆವರೇ ಬಿಡು ಮರುಳೆ ನಿನಗಿಂ
ದಿನಲಿ ಮಾಳ್ಪ ಪುನಸ್ಸ್ವಯಂವರ
ಮನಕೆ ಸರಿಬಂದವನ ನೀನೊಲಿಸೆಂದನಾ ನೃಪತಿ ೫೦

ಎನಲು ಕರ್ಣಂಗಳಿಗೆ ಸಬಳದ
ಮೊನೆಗಳಿರಿದಂತಾಗೆ ಸತಿ ಕ
ಣ್ಣಿನಲಿ ತುಂಬಿದಳುದಕವನು ಹರ ಹರ ಶಿವಾ ಎನುತ
ಎನಗೆಯಿನ್ನು ಪುನಸ್ಸ್ವಯಂವರ
ಮನದೊಳುಂಟೇ ನೀವು ಬರಬೇ
ಕೆನುತ್ವಾರ್ತೆಯ ಕಳ್ಪಿಸಿದೆ ಕೇಳೆಂದಳಿಂದುಮುಖಿ

ನಂಬಿದೆನು ಲೇಸಾಗಿ ಮನದೊಳ
ಗಿಂಬುಗೊಂಡುದು ವಿಕೃತಿ ರೂಪಿನ
ಡೊಂಬಿಯೇಕಿದು ಸಕಲ ಧರ್ಮವಿಚಾರವಂತರಿಗೆ
ಅಂಬುಜಾಕ್ಷನ ರೂಪಿನಲಿ ಪ್ರತಿ
ಬಿಂಬವಲ್ಲವೆ ನೀವು ಬಯಲಾ
ಡಂಬರದ ನುಡಿಯೇಕೆ ಸಾಕಿನ್ನೆಂದಳಿಂದುಮುಖಿ ೫೨

ನೋಯೆ ನೊಂದಿಹ ಸತಿಯನಾಡಲು
ನ್ಯಾಯವೇನಿದು ನಿನಗೆ ಕೇಳಿಲೆ
ರಾಯ ನಿನ್ನನು ನೋಡ ಕಳುಹಿದೆ ಚರರ ದಿಕ್ಕಿನಲಿ
ಮಾಯರೂಪಿದ ಕಾಣಲರಿಯದೆ
ಬಾಯಬಿಡುತ್ತಿರಲಿನ್ನಯೋಧ್ಯೆಯ
ರಾಯನಲಿ ನೂತನದ ಸಾರಥಿಯೆಂದು ಕೇಳಿದೆನು ೫೩

ಆಗ ಭೂಸುರಪತಿ ಸುದೇವನ
ಬೇಗಲಟ್ಟಿದೆ ನಿಮ್ಮ ಬಳಿಗೆ ಸ
ರಾಗದಿಂದುತ್ತರಕೆ ಪ್ರತ್ಯುತ್ತರವ ಪೇಳ್ದಿರಲ
ಈಗಳಿದು ಸಂಶಯವೆ ತಾನದ
ಕಾಗಿ ಕರಸಿ ಸ್ವಯಂವರವ ನಿಮ
ಗಾಗಿ ಪೇಳಿದೆನಿದರ ತಪ್ಪೇನೆಂದಳಿಂದುಮುಖಿ ೫೪

ಜನನುತನೆ ಕೇಳಾದಿಯಲಿ ಯೌ
ವನವ ನಿನಗೊಪ್ಪಿಸಿದೆನಲ್ಲದೆ
ತನುಮನೋವಾಕ್ಕಾಯಕರ್ಮಂಗಳಲಿ ತಾನೆರಡ
ನಿನಗೆ ನೆನೆದವಳಲ್ಲ ನೀನೇ
ಎನಗೆ ಗತಿಯೆಂದಿಹುದನರಿಯಾ
ಜನಪ ರಕ್ಷಿಸು ಕೈವಿಡಿದು ಸಲಹೆಂದಳಿಂದುಮುಖಿ ೫೫

ಇದಕೆ ಯಮವರುಣಾನಿಲೇಂದ್ರರು
ಮದನಜನಕನೆ ಸಾಕ್ಷಿಯೆನೆ ಮೇ
ಘದಲಿ ನುಡಿದನು ವಾಯು ನಳನೃಪನೊಡನೆ ಸತ್ಯವನು
ಚದುರ ಕೇಳ್ ದಮಯಂತಿ ಲೋಕದ
ಸುದತಿಯೇ ತಿಳಿ ಲೋಕಪಾವನೆ
ಇದಕೆ ಸಂಶಯವೇಕೆ ಪಾಲಿಸು ಸತಿಯ ನೀನೆಂದು ೫೬

ಪವನನಾಡಿದ ನುಡಿಯ ಕೈಕೊಂ
ಡವನಿಪತಿ ಬಿನ್ನೈಸಿದನು ಕೈ
ತವದೆ ಕಲಿಯಿಂದ ನೊಂದೆನು ನಿಮ್ಮ ದರುಶನದಿ
ಬವಣೆ ಹಿಂಗಿ ಕೃತಾರ್ಥನಾದೆನು
ಎನಗೆಯಿನ್ನೇನೆನುತ ಪಕ್ಷಿಯ
ಹವಣ ಮನದಲಿ ನೆನೆಯೆ ಬಂದುದು ದಿವ್ಯಮಯವಸನ ೫೭

ಧರಿಸಿದನು ನಳನಾ ದುಕೂಲವ
ಪರಿಹರಿಸಿತಾ ರೂಪು ಮುನ್ನಿನ
ಪರಮತೇಜದ ದಿವ್ಯತನುವಿನೊಳೆಸೆದು ರಂಜಿಸಲು
ಸುರರ ದುಂದುಭಿ ಮೊಳಗೆ ಮಲ್ಲಿಗೆ
ಯರಳ ಮಳೆ ಸೂಸಿದವು ಗಗನದಿ
ಸುರಮುನಿಗಳಕ್ಷತೆಯ ತಳಿದರು ಹರಸಿ ನಳನೃಪನ ೫೮

ಸುರರು ಕೊಂಡಾಡಿದರು ಯಮಭಾ
ಸ್ಕರ ವಿರಿಂಚಾದಿಗಳುಲಿಯೆ ವರ
ತರುಣಿ ಬಂದೆರಗಿದಳು ಪತಿಯಂಘ್ರಿಯಲಿ ದಮಯಂತಿ
ಹರುಷದಲಿ ಬಿಗಿಯಪ್ಪಿದನು ಭೂ
ಸುರರು ಸಂಭ್ರಮಿಸಿದರು ವರಪುರ
ದರಪ್ಪ ಚೆನ್ನಿಗರಾಯ ಸಲಹಿದನವರ ಕರುಣದಲಿ

## ೯. ನಳನೃಪ ಧರೆಯನಾಳಿದ ಪರಿ

ಕೇಳು ಪಾಂಡುಕುಮಾರ ನಳಭೂ
ಪಾಲನಭ್ಯುದಯವನು ಮಂಗಳ
ದೇಳಿಗೆಯನೇನೆಂಬೆ ದಮಯಂತಿಯ ಮಹೋತ್ಸವವ
ಲೀಲೆಯಲಿ ಮಜ್ಜನವ ಮಾಡಿ ದು
ಕೂಲ ಮಣಿಭೂಷಣವ ಧರಿಸಿ ಥ
ಡಾಳಿಸುವ ಕಾಂತಿಯಲಿ ಸಿಂಹಾಸನದಿ ಕುಳ್ಳಿರ್ದ ೧

ಬಂದು ಕಂಡುದು ನಿಖಿಳ ಪುರಜನ
ವಂದು ಕಾಣಿಕೆಗೊಟ್ಟು ಮುದದಲಿ
ಸಂದಣಿಸೆ ಋತುಪರ್ಣ ಬಂದನು ಮಂತ್ರಿಜನ ಸಹಿತ
ಸಂದ ಮಣಿ ಕಾಂಚನ ಸುವಸ್ತುವ
ತಂದು ಸಮುಖದೊಲಿರಿಸಿ ವಿನಯದಿ
ನಿಂದು ಬಿನ್ನೈಸಿದನು ಕರಗಳ ಮುಗಿದನು ನಳನೃಪಗೆ ೨

ರೂಢಿಯಲಿ ನಾ ನಿಮ್ಮನರಿಯದ
ಮೂಢಮತಿಯವಿವೇಕಿ ತುರಗವ
ಹೂಡಿದಾಗಲೆ ರಥಕೆ ಅಡಿಗೆಯೊಳರಿದೆನೇ ತಾನು
ಮಾಡಿದಪರಾಧಗಳನೊಂದನು
ನೋಡಲಾಗದು ಚಿತ್ತದಲಿ ಖಯ
ಖೋಡಿಯಿಲ್ಲದೆ ಸಲಹಬೇಕೆಂದೆರಗಿದನು ಪದಕೆ

ಈ ಪರಿಯೊಳೆನಲಾ ನೃಪನ ಸಂ
ತಾಪವನು ಪರಿಹರಿಸಿ ನಳನೃಪ
ತಾ ಪಿರಿದು ಮಣಿಭೂಷಣಂಗಳನಿತ್ತು ನಸುನಗುತೆ
ಕೋಪವೆನಗಿಲ್ಲೆಂದಯೋಧ್ಯಾ
ಭೂಪನನು ಮನ್ನಿಸುವ ಸಮಯದಿ
ತಾಪಸೋತ್ತಮರರಸ ಬಂದನು ನಗುತ ಮೈತ್ರೇಯ ೪

ಬಂದ ಮುನಿಗವನೀಶ ಚರಣ
ದ್ವಂದ್ವದಲಿ ಚಾಚಿದನು ಮಕುಟವ
ನಂದು ಪಿಡಿದೆತ್ತಿದನು ನಸುನಗುತಲ್ಲಿ ಕುಳ್ಳಿರ್ದು
ಎಂದನೆಲೆ ನಳನೃಪತಿ ನಿಮಗೆ ಮು
ಕುಂದನೊಲವು ಸದಾವಕಾಲದಿ
ಸಂದಿರಲು ಇನ್ನಾವುದರಿದಿಲ್ಲೆಂದನಾ ಮುನಿಪ ೫

ಕಲಿಪುರುಷನಿಂದಾದುದುಪಹತಿ
ಲಲನೆ ಪುತ್ರರನಗಲಿ ಕಷ್ಟವ
ಬಳಸಿದೆಯಲಾ ನೊಂದು ಸತ್ಯವ ಬಿಡದೆ ಸಂಚರಿಸಿ
ಸುಲಭನಾದೆ ಕುಲಾಂಗನೆಯ ವ್ರತ
ಫಲದ ಪುಣ್ಯೋದಯದಿ ನಿಜಸಿರಿ
ಫಲಿಸಿತಿನ್ನೀಲೋಕದೊಳು ನಿನಗಾರು ಸರಿಯೆಂದ ೬

ಎಲ್ಲ ನೃಪರಂತಲ್ಲ ಲಕ್ಷ್ಮೀ
ವಲ್ಲಭನ ಪ್ರತಿಬಿಂಬ ನಿನ್ನಲಿ
ನಿಲ್ಲಬಲ್ಲನೆ ಕಲಿಪುರುಷನತಿಬೇಗ ತೆರಳಿದನು
ಸಲ್ಲಲಿತ ಸಾಮ್ರಾಜ್ಯ ಪದವಿಂ
ದೆಲ್ಲ ನಿನಗಹುದೆಂದು ಧರಣೀ
ವಲ್ಲಭನ ಸತ್ಕರಿಸಿ ಕೊಂಡಾಡಿದನು ಮೈತ್ರೇಯ

ಎಂದು ಹರಸಿದವನವನಿಪಗೆ ಮುದ
ದಿಂದ ಮುಂತ್ರಾ ಕ್ಷತೆಗಳಲಿ ಮುನಿ
ವೃಂದ ಸಂತೋಷಿಸಿತು ನೃಪ ಸಿಂಹಾಸನದೊಳಿರಲು
ಇಂದುವದನೆಯರಾರತಿಯ ನಲ
ವಿಂದಲೆತ್ತಿರದಲ್ಲಿ ಸತಿಯರು
ಸಂದಣಿಸಿ ಪಾಡಿದರು ಶೋಭಾನವನು ಮನವೊಲಿದು ೮

ಅರಸ ಕೇಳು ವಿದರ್ಭಪತಿ ಮುನಿ
ವರರನುಪಚರಿಸಿದನು ಧರಣೀ
ಸುರರಿಗಿತ್ತನು ಗೋಹಿರಣ್ಯಫಲಾದಿ ದಾನವನು
ಕರಸಿಕೊಟ್ಟನು ನೃಪತಿ ಸಕಲಾ
ಭರಣಗಳ ಕರಿತುರಗರಥವನು
ಪುರಜನರ ಸಂತೈಸಿ ಕಳುಹಿದನಖಿಳಬಾಂಧವರ ೯

ಹರೆದುದೋಲಗವಲ್ಲಿ ಯಾಚಕ
ವರರು ಕೊಂಡಾಡಿದರು ಧರಣೀ
ಶ್ವರರು ಕಳುಹಿಸಿಕೊಂಡು ಹೊಕ್ಕರು ತಮ್ಮ ನಗರಿಗಳ
ಮರುದಿವಸ ಋತುಪರ್ಣ ನಳನೃಪ
ಗೆರಗಿ ಕಳುಹಿಸಿಕೊಂಡಯೋಧ್ಯಾ
ಪುರವ ಹೊಕ್ಕನು ಚೈದ್ಯಭೂಪತಿ ಮರಳಿದನು ಪುರಕೆ ೧೦

ಇಂದುಮುಖಿ ದಮಯಂತಿಯೊಡನಾ
ನಂದದಲಿ ನಳನೃಪತಿ ಮಾವನ
ಮಂದಿರದೊಳೊರ್ಬರಿಸವಿದ್ದನು ಸಕಲ ವಿಭವದಲಿ
ಹಿಂದುಗಳೆಯದೆ ನಿಷಧಪುರಿಗಾ
ವಿಂದು ಗಮಿಸಲುಬೇಕೆನುತ ನಳ
ನಂದು ಭೀಮನೃಪಾಲನೊಡನಾಲೋಚಿಸಿನ ಹದನ

ದಂಡು ನಡೆಯಲಿ ನಿಷಧನಗರಿಗೆ
ಭಂಡನಹ ಪುಷ್ಕರನ ಮಾತೇ
ನಂಡಲೆದು ಫಲವಿಲ್ಲ ಸಾಕಿನ್ನೇಳಿಯೆಂದೆನುತ
ಮಂಡಲಾಧಿಪನೆನಲು ಭೂಪರ
ತಂಡವೆದ್ದುದು ಕೂಡೆ ಭಟರು
ದ್ದಂಡ ಕೈದುವ ಕೊಂಡು ನಡೆದರು ನಳನ ಸನ್ನಿಯಲಿ ೧೨

ತುರಗ ಹಲ್ಲಣಿಸಿದುದು ರಥ ವೋ
ಹರಿಸಿ ತೆರಳಿತು ಸಂಗರಕೆ ಮದ
ಕರಿಗಳಿಟ್ಟಣಿಸಿದವು ಕಾಲಾಳಿರದೆ ಸಂದಣಿಸಿ
ನೆರೆದುದಗಣಿತ ಸೈನ್ಯ ಸಾಗರ
ಮೊರೆವವೊಲ್ ಗಂಭೀರ ಭೇರಿಗ
ಳುರವಣಿಸೆ ಹೊರವಂಟ ನಳನೃಪನರಸ ಕೇಳೆಂದ ೧೩

ದಾಳಿಯಿಟ್ಟರು ಹರಿದು ದಿಕ್ಕಿನ
ಮೂಲೆಯವರಂಜಿದರು ಮುಮ್ಮೊನೆ
ಯಾಳು ಕವಿದುದು ಹಿಡಿದುದಗ್ಗದ ಸಿರಿಯ ಸೂರೆಗಳ
ಕೇಳಿದನು ಪುಷ್ಕರನು ನಿಷಧನ
ದಾಳಿ ಬರುತಿದೆ ಎನಲು ಖತಿಯಲಿ
ಕಾಳಗಕ್ಕನುವಾಗೆ ನೃಪತಿಗೆ ನುಡಿದ ಮಂತ್ರೀಶ ೧೪

ಅರಿಭಯಂಕರ ನೈಷಧನ ಸಂ
ಗರದಿ ಗೆಲುವವರಾರು ದೇವಾ
ಸುರರು ನಿಲಲರಿದರಸ ಮಿಕ್ಕಿನ ನರರ ಪಾಡೇನು
ಮರಳುತನ ಬೇಡಿನ್ನು ನೃಪನನು
ಕರಸಿ ಸಂಧಿಯ ಮಾಡಿ ಜೂಜಿನ
ಪಣನು ಪಂಥದಿ ಗೆಲುವುದುಚಿತವಿದೆಂದನಾ ಮಂತ್ರಿ

ಎನಲು ಕೇಳ್ದಾ ಮಾತಿನಲಿ ಬಂ
ದನು ನಳನ ಕಂಡನು ಮಹೀಪತಿ
ಎನಗೆ ನಿಮ್ಮಲಿ ಕದನವೇತಕೆ ಸಾಕದಂತಿರಲಿ
ಜನಪತಿಗಳೀಕ್ಷಿಸಲಿ ಮರುಜೂ
ಜಿನಲಿ ನಿಪುಣರು ನಾವು ನಿಮ್ಮಲಿ
ಮನಕೆ ಹರುಷಿತವಾಗಲಾಡುವೆನೆಂದ ನಸುನಗುತ ೧೬

ಎಲವೊ ಕೇಳಿನ್ನಾದುದಾಗಲಿ
ಕಲಹಕಂಜುವೆ ನೀನು ಜೂಜಿನ
ಬಳಕೆಯಲಿ ಬಲ್ಲಿದನು ನಮ್ಮನು ಕರೆದೆ ತಪ್ಪೇನು
ಕಲಹವಾಗಲಿ ಜೂಜದಾಗಲಿ
ಗೆಲುವೆ ನಿನ್ನನು ಕುಟಿಲ ಹೃದಯದ
ನೆಲೆಯ ಬಲ್ಲೆನು ನಿನಗೆ ಮನವೊಲಿದುದನು ಮಾಡೆಂದ ೧೭

ಅರಸ ಕೇಳಾ ಪುಷ್ಕರನು ತ
ನ್ನರಮನೆಗೆ ಕರೆತಂದನಾ ಕಲಿ
ಪುರುಷನಿಂದಲಿ ಮುನ್ನ ಗೆಲಿದಗ್ಗಳಿಕೆಯಲಿ ನೃಪನ
ಪಿರಿದು ತಾ ಗೆಲಬಲ್ಲೆನೆಂದಾ
ಪ್ತರನು ಕರಸಿದನೋಲಗದಿ ಕು
ಳ್ಳಿರಲು ತಂದರು ಸಾರಿಗಳ ನಿಲಿಸಿದರು ಸಮ್ಮುಖದಿ ೧೮

ನಳನೃಪತಿ ನೀ ಗೆಲಿದಡೀ ಭೂ
ಲಲನೆಯನು ತಾ ಬಿಡುವೆ ಸೋತರೆ
ಬಳಿಕ ದಮಯಂತಿಯನು ನನಗೊಪ್ಪಿಸುವುದೆಂದೆನಲು
ಇಳೆಯೊಳಿಹ ಭೂರುಹದ ಹೃದಯದ
ನೆಲೆಯ ಬಲ್ಲಗ್ಗಳಿಕೆಯಲಿ ತಾ
ಗೆಲುವೆನೆಂದೊಪ್ಪಿದನು ಮನದಲಿ ಧೈರ್ಯಪರನಾಗಿ ೧

ಹೂಡಿದರು ಸಾರಿಗಳ ನೆತ್ತವ
ನಾಡಿದರು ಮನ ನಲಿದು ಖಾಡಾ
ಖಾಡಿಯಲಿ ದುಗ ಬಾರ ಇತ್ತಿಗನೆಂಬ ರಭಸದಲಿ
ಬೇಡಿದರೆ ಬೀಳುವುದು ದಾಯದ
ರೂಢಿ ಜಳುಪಿಸೆ ಹೊಳೆವ ದಾಳದ
ರೂಢಿಗಚ್ಚರಿಯಾಗೆ ನಳನೃಪ ಗೆಲಿದು ಬೊಬ್ಬಿರಿದ ೨೦

ಖಿನ್ನನಾದನು ಪುಷ್ಕರನು ಹರು
ಷೋನ್ನತಿಯು ಬೀಳ್ಕೊಡಲು ಗುಣಸಂ
ಪನ್ನನೇರಿದ ರತ್ನಸಿಂಹಾಸನವ ನಳನೃಪತಿ
ಪನ್ನಗಾರಿಧ್ವಜನ ಕೃಪೆ ನಿನ
ಗಿನ್ನು ಸಿದ್ಧಿಸಲೆಂದು ಮುನಿಜನ
ರುನ್ನತದಿ ಕೊಂಡಾಡಿ ಹರಸಿದರಲ್ಲಿ ನಳನೃಪನ ೨೧

ದೇವದುಂದುಭಿ ಮೊಳಗಿದುದು ದಿವಿ
ಜಾವಳಿಗಳಭ್ರದಲಿ ಸಂಧಿಸಿ
ಹೂವಿನಲಿ ಮಳೆಗರೆದರಾ ನೃಪನುತ್ತಮಾಂಗದಲಿ
ಕೋವಿದರು ಸುಜನಾವನೀಶರು
ಸೇವಿಸಲು ಧರೆ ನಲಿಯೆ ನೃಪ ರಾ
ಜೀವಲೋಚನನಂತೆ ಸಿಂಹಾಸನದಿ ರಂಜಿಸಿದ ೨೨

ನಲವು ಹಿಂಗಿದ ಪುಷ್ಕರನ ಮನ
ವೊಲಿದು ಮನ್ನಿಸಿ ಕರೆದು ನಳನೃಪ
ಕಲಿಪುರುಷನಿಂದಾದುಪಹತಿ ನಿನ್ನ ತಪ್ಪೇನು
ಹಲವ ಹಂಬಲಿಸದಿರು ನಿನ್ನಲಿ
ಛಲವು ನಮಗಿನಿತಿಲ್ಲ ಮುನ್ನವೊ
ಲಿಳೆಯ ಪಾಲಿಸು ನಮ್ಮ ನೀನೋಲಗಿಸು ಹೋಗೆಂದ

ಎನಲು ಲಜ್ಜಿತನಾಗಿ ಪುಷ್ಕರ
ವಿನಯದಲಿ ತಾನೆರಗಿ ನಿಮ್ಮಡಿ
ವನಜದೆಡೆಗಪರಾಧಿಯಾದೆನಗಾವ ಗತಿಯಹುದೊ
ಜನಪ ಸಲಹು ಕೃತಘ್ನನನು ಸ
ಜ್ಜನ ಶಿರೋಮಣಿ ನೀನು ಗುಣ ಹೀ
ನನನು ಕೃಪೆಯಲಿ ರಕ್ಷಿಸೆಂದೆರಗಿದನು ಪದಯುಗಕೆ ೨೪

ತನುವ ಸೈಗೆಡೆದಿಹನನೆಬ್ಬಿಸಿ
ಜನಪನೆಂದನು ಪೂರ್ವಫಲ ಸಂ
ಜನಿಸಿತಿದಕಿನ್ನಾರು ಮಾಡುವುದೇನು ಎನುತವನ
ವಿನಯವಚನಕೆ ಮೆಚ್ಚಿಕೊಟ್ಟನು
ಕನಕ ಮಣಿ ಭೂಷಣಗಳನು ಕಾಂ
ಚನವರೂಥವನಿತ್ತು ಮನ್ನಿಸಿ ಕಳುಹಿದನು ಮನೆಗೆ ೨೫

ಚಿಂತೆ ಬಲಿದು ವಿದರ್ಭದಲಿ ದಮ
ಯಂತಿ ಕೆಳದಿಯರೊಡನೆ ನುಡಿದಳು
ಪಂತದಲಿ ಪುಷ್ಕರನ ಗೆಲಿದನೋ ಸೋತನೊ ನೃಪತಿ
ಕಂತುಪಿತನ ಕೃಪಾವಲೋಕನ
ವೆಂತಿಹುದೊ ತನಗೆಂಬ ಸಮಯದ
ಲಂದು ಕಾತರದಲ್ಲೈತಂದರಲ್ಲಿಗೆ ನಳನ ಮಂತ್ರಿಗಳು ೨೬

ತಾಯೆ ಬಿನ್ನಹವಿಂದು ನಮ್ಮನು
ರಾಯನಟ್ಟಿದ ನಿಮ್ಮ ಬಳಿಗೆ ನಿ
ರಾಯಸದಿ ಪುಷ್ಕರನ ಗೆಲಿದನು ಸಕಲ ರಾಜ್ಯವನು
ನ್ಯಾಯದಲಿ ಕೈಗೊಂಡು ನಿಮ್ಮನು
ಪ್ರೀಯದಿಂ ಬರಹೇಳಿದನು ಕಮ
ಲಾಯುತಾಂಬಕಿ ಬಿಜಯಮಾಡೆಂದೆರಗಿದರು ಪದಕೆ

ಕೇಳಿ ಹರುಷಿತೆಯಾದಳವರಿಗೆ
ಪಾಲಿಸಿದಳಾಭರಣವಸ್ತುವ
ಲೋಲಲೋಚನೆ ಬಂದು ತಂದೆಗೆ ನಮಿಸಿ ವಿನಯದಲಿ
ನಾಳೆಪಯಣವ ಮಾಡಿ ನಿಷಧನೃ
ಪಾಲನಲ್ಲಿಗೆ ತನ್ನ ಕಳುಹೆನೆ
ಬಾಲಕಿಯ ನುಡಿಗೇಳಿ ತೆಗೆದಪ್ಪಿದನು ಭೀಮ ನೃಪ ೨೮

ತೆಗೆಸಿದನು ಭಂಡಾರದಲಿ ಬಗೆ
ಬಗೆಯ ವಸ್ತುವ ಸುಭಟರಿಗೆ ಝಗ
ಝಗಿಪ ಹೊನ್ನಾಯುಧವ ನವರತ್ನಗಳ ತೊಡಿಗೆಗಳ
ಸುಗುಣೆಯುರು ಮೊದಲಾದ ಪರಿವಾ
ರಗಳಿಗಿತ್ತನು ಪಯಣದಲಿ ತೇ
ರುಗಳ ಶೃಂಗರಿಸಿದರು ಬಿರುದಿನ ಸಿಂಧುಗಳ ನೆಗಹಿ ೨೯

ಬಂದಳಾ ದಮಯಂತಿ ದೇವ ಮು
ಕುಂದ ರಕ್ಷಿಸುಯೆನುತ ತನ್ನಯ
ನಂದನರ ಸಹಿತೇರಿದಳು ಮಣಿಮಯವರೂಥವನು
ಹಿಂದೆ ಮುಂದಿಕ್ಕೆಲದೆ ನಾರೀ
ವೃಂದ ನಡೆಯಲು ಮನದ ಹರ್ಷಾ
ನಂದದಲಿ ನಡೆತಂದು ಹೊಕ್ಕಳು ನಿಷಧಪಟ್ಟಣವ ೩೦

ಹರಕೆಗಳ ಕೈಗೊಳುತ ಸತಿ ಬಂ
ದರಮನೆಯ ಹೊಕ್ಕಳು ನೃಪಾಲನ
ಚರಣಕಮಲಕೆ ನಮಿಸಿ ಪಡೆದಳು ಪತಿಯ ಚಿತ್ತವನು
ಅರಸ ಕೇಳ್ಕೈ ನಿಷಧಪತಿ ನಿಜ
ತರುಣಿಸುತರೊಡಗೂಡಿ ಮಂಗಳ
ಕರದೊಳೊಪ್ಪಿದ ಸಕಲ ದೇವಾಮರರು ನಲಿದಾಡೆ ೩

ಪರಮ ಪುಣ್ಯೋದಯನು ಸದ್ಗುಣ
ಭರಿತ ಸತ್ಯಸುಭೂಷಿತನು ಸಂ
ಗರ ಸುಧೈರ್ಯವನು ನಿತ್ಯನಿರ್ಮಲ ನಿಗಮಕೋವಿದನು
ಅರಸುಕುಲಪಾವನನು ನಳಭೂ
ವರನು ಸಿಂಹಾಸನದಿ ರಂಜಿಸಿ
ಧರೆಯನಾಳಿದ ವರಪುರದ ಚೆನ್ನಿಗನ ಕರುಣದಲಿ ೩೨

ಮೇದಿನಿಯೊಳೀ ಪುಣ್ಯಚರಿತೆಯ
ನಾದರದಿ ಬರೆದೋದಿ ಕೇಳುವ
ಸಾಧುಸಜ್ಜನರಾದವರಿಗಹುದಖಿಳ ಕೈವಲ್ಯ
ವೇದಗೋಚರ ಕೃಷ್ಣ ವರಪುರ
ದಾದಿಕೇಶವನಮರವಂದಿತ
ನಾದಿನಾರಾಯಣನು ಸಲಹುವನಖಿಳ ಸಜ್ಜನರ ೩೩

---

# ಟಿಪ್ಪಣಿಗಳು

ಮುಂದಿನ ಪುಟಗಳಲ್ಲಿ ಈ ಸಂಗ್ರಹದಲ್ಲಿ ಬರುವ ಕಠಿಣ ಪದಗಳ ಅರ್ಥ, ಪೂರ್ವಕಥೆಗಳು, ವ್ಯಾಕರಣಕ್ಕೆ ಸಂಬಂಧಿಸಿದ ಕೆಲವು ಸಾಮಾನ್ಯ ವಿಷಯಗಳು—ಇವೇ ಮೊದಲಾದ ಕೆಲವು ಉಪಯುಕ್ತ ವಿಷಯಗಳನ್ನು ಹೇಳಿದೆ. ಈ ಉದ್ದೇಶಸಾಧನೆಗಾಗಿ ಇಲ್ಲಿ ಕೆಲವು ಸಂಕೇತಗಳನ್ನು ಬಳಸಿದೆ. ಅವುಗಳು ಯಾವುವೆಂದರೆ—ಸಂ. ಎಂದರೆ ಸಂಸ್ಕೃತ, ದ್ಭ—ಎಂದರೆ ತದ್ಭವ, ಪಾ. ಎಂದರೆ ಪಾಠಾಂತರ. ಕು. ಭಾ. ಎಂದರೆ ಕುಮಾರವ್ಯಾಸ ಭಾರತ ಎಂದರ್ಥ.

ಮುಂದೆ ಬರುವ ಅಂಕಿಗಳು ಆಯಾ ಸಂಧಿಯಲ್ಲಿ ಬರುವ ಪದ್ಯಗಳನ್ನು ಸೂಚಿಸುತ್ತವೆ.

## ೧. ಮಂಗಳಾಚರಣೆ

ಹಿಂದಿನ ಕನ್ನಡ ಕವಿಗಳು—ಅವರು ಜೈನರಾಗಲೀ, ವೀರಶೈವರಾಗಲೀ, ಬ್ರಾಹ್ಮಣರಾಗಲೀ ಇಲ್ಲವೆ ಇತರ ಯಾವ ಮತದವರೇ ಆಗಲೀ—ಕಾವ್ಯದ ಪ್ರಾರಂಭದಲ್ಲಿ ತಮ್ಮ ಇಷ್ಟದೇವತೆಯನ್ನು ಕುರಿತು ಪ್ರಾರ್ಥನೆ ಮಾಡುವುದು ಸಂಪ್ರದಾಯ. ಕನಕದಾಸನ ಇಷ್ಟದೈವ ಕಾಗಿನೆಲೆಯ ಆದಿಕೇಶವ ಹಾಗೂ ವರಪುರ(ಬೇಲೂರು)ದರಸ ಚೆನ್ನಿಗರಾಯ. ನಳಚರಿತ್ರೆ ವರಪುರದರಸ ಚೆನ್ನಿಗರಾಯನ ಸ್ತೋತ್ರದಿಂದ ಮೊದಲಾಗುತ್ತದೆ.

ಈ ಕಾವ್ಯದ ಪ್ರತಿಯೊಂದು ಸಂಧಿಯೂ ಚೆನ್ನಿಗರಾಯನ ಅಂಕಿತದಿಂದ ಮುಗಿಯುವುದನ್ನು ನಾವು ಗಮನಿಸಬಹುದು.

ಸಾಮಾನ್ಯವಾಗಿ ಶ್ರೀಕಾರದಿಂದ ಕಾವ್ಯವನ್ನು ಮೊದಲು ಮಾಡುವುದು ಕನ್ನಡ ಕವಿಗಳ ಇನ್ನೊಂದು ಸಂಪ್ರದಾಯ. ಇದರಿಂದ ಕಾವ್ಯವನ್ನು [illegible]ೆದವನಿಗೂ, ಕೇಳುವವರಿಗೂ ಅನಿಷ್ಟನಿವಾರಣೆಯಾಗಿ, ಮಂಗಳವುಂಟಾ[illegible]ದಲ್ಲದೆ ಕಾವ್ಯ ಯಾವ ತೊಡಕೂ ಇಲ್ಲದೆ ಮುಗಿಯುವುದೆಂದು ಕವಿ [illegible]ನಂಬಿದ್ದರು.

[illegible] ಶ್ರೀ—ಲಕ್ಷ್ಮಿಗೆ, ರಮಣ—ಗಂಡ, ನಾರಾಯಣ. ಸರಸಿಜ—[illegible]ದಂತೆ, ಅಕ್ಷ—ಕಣ್ಣುಳ್ಳವನು ; ಅಗಲವಾದ ಕಣ್ಣು ಚೆಲುವಿಕೆಂ[illegible] [illegible]ರುತ್ತ[illegible]. ಕಣ್ಣು, ಮುಖ, ಕೈ, ಪಾದ ಇವುಗಳನ್ನು ಕಮ[illegible]

ಹೋಲಿಸುವುದು ನಮ್ಮ ಕವಿಗಳಲ್ಲಿ ರೂಢಿ. ಸಚರ—ಸಂಚರಿಸುವ (ಜೀವ ವಿರುವ, ತಿರುಗಾಡುವ), ಅಚರ—ಚಲಿಸದ ಸಮಸ್ತ ಪದಾರ್ಥಗಳಲ್ಲಿಯೂ ಭರಿತ—ತುಂಬಿರುವವನು. ದೇವರು ಈ ಲೋಕವನ್ನೆಲ್ಲಾ ವ್ಯಾಪಿಸಿದ್ದಾನೆ ಎಂದು ಭಾವ. 'ಅಣೋರಣೀಯಾನ್ ಮಹತೋ ಮಹೀಯಾನ್' (ಅಣುವಿಗಿಂತ ಅಣು, ಮಹತ್ತಿಗಿಂತ ಮಹತ್ತು) ಎಂದು ಉಪನಿಷತ್ತಿನಲ್ಲಿ ಹೇಳಿದೆ. ನಿರ್ಜರ—ದೇವತೆ. ನಿಕರ—ಸಮೂಹ. ದಾತಾರ—ದಾನಿ. ದೇವತೆಗಳ ಕಷ್ಟನಿವಾರಕ ವಿಷ್ಣು. ವಾರಿಜ—ಕಮಲದಂತೆ, ಅಂಬಕ—ಕಣ್ಣುಳ್ಳವನು. (ಮೇಲೆ ಹೇಳಿದುದನ್ನೇ ಬೇರೆ ಮಾತಿನಲ್ಲಿ ಹೇಳಿದ್ದಾನೆ. ಪುನರುಕ್ತಿ) ಮಾರ—ಮನ್ಮಥ. ಪಿತ—ತಂದೆ. 'ವರಗುಣತ್ರಯ' 'ಸಾಕಾರ—ಚೆನ್ನಿಗರಾಯ ಪಾಲಿಸು ಜಗಕೆ ಮಂಗಳವ'—ಪಾ.

೨. ಈ ಪದ್ಯದಲ್ಲಿ ಕಷ್ಟಗಳನ್ನು ಪರಿಹರಿಸುವ ಗಣಪತಿಯ ಸ್ತೋತ್ರವಿದೆ.

ಕರಿ—ಆನೆಯ, ವದನ—ಮುಖವುಳ್ಳವನು. ಲಂಬ+ಉದರ—ದೊಡ್ಡ ಹೊಟ್ಟೆ. ಚತುರ್—ನಾಲ್ಕಾದ, ಭುಜ—ತೋಳು. ಮೋದಕ—ಕಡುಬು. ಪರಶು—ಗಂಡುಗೊಡಲಿ. ಪಾಶ—ಹಗ್ಗ. (ಗಣಪತಿಯ ಒಂದು ಆಯುಧ) ಅಂಕಿತ—ಗುರುತು. ರಂಜಿಸು—ಶೋಭಿಸು. ಉರಗ—ಸರ್ಪ. ವಿದ್ಯಾವಾರಿಧಿ (ಸಮುದ್ರ) ಎಂದಿರಬೇಕು. ಆದರೆ ಛಂದಸ್ಸಿಗಾಗಿ ಈ ರೂಪ ಬಂದಿದೆ. ಹಾಗೆಯೇ ವಸುಧೆಪತಿ, ವನಿತೆಗುಣ ಇವೇ ಮೊದಲಾದ ಅರಿಸಮಾಸರೂಪಗಳು. ವರದ—ವರ ಕೊಡುವ. ಮತಿ—ಬುದ್ಧಿ.

೩. ಈ ಪದ್ಯದಲ್ಲಿ ಸರಸ್ವತಿಯ ಸ್ತೋತ್ರವಿದೆ.

ನಳಿನ—ಕಮಲದ ದಳದಂತೆ, ಅಕ್ಷಿ—ಕಣ್ಣುಳ್ಳವಳು. ಜಂಭಾರಿ—ಇಂದ್ರ. ಚತುರ್+ಆನನ—ನಾಲ್ಕು ಮುಖವುಳ್ಳವನು, ಬ್ರಹ್ಮ. ಭೂರಿ—ಹೆಚ್ಚಾದ. ಭಕ್ತರಿಗೂ, ಆಶ್ರಿತ ಜನರಿಗೂ ಸರಸ್ವತಿ ಆಧಾರಳು. ನೀರೆ—ಸುಂದರಿ. ಜಿಹ್ವೆ—ನಾಲಗೆ.

೪. ರಾಜನ್ (ಸಂ)—ರಾಯ, ಅಗ್ಗಳಿಯನು—ಶ್ರೇಷ್ಠನು ಆಹ—ಆಗಿರುವ. ಕೌಂತೇಯ—ಕುಂತಿಯ ಮಗ, ಧರ್ಮರಾಜ. ವಿಸ್ತರಿಸು—ಹೇ... ಪ್ರಿಯ—ಪ್ರೀತಿ, ಸಂತೋಷ. ಆಲಿಸು—ಕೇಳು. ಅರಣ್ಯವಾಸದಲ್ಲಿ ಧ... ರಾಯನಿಗೆ ನಳದಮಯಂತಿಯರ ಕಥೆಯನ್ನು ರೋಮಶ ಋಷಿಗಳು... ದರು.

೫. ನಳಚರಿತ್ರೆಯನ್ನು ಕೇಳುವುದರಿಂದಾಗುವ ಫಲವನ್ನು ಈ ಪ...ಲ್ಲಿ ...ಳಿದೆ. ಹಿಂದಿನ ಕಾಲದಲ್ಲಿ ಈಗಿನಂತೆ ವಿದ್ಯೆ ದೇಶದಲ್ಲೆಲ್ಲ ಹರಡಿ...

ಆದರೆ ಓದಿನಿಂದ ಬರಬಹುದಾದ ಸಂಸ್ಕಾರವನ್ನು ಜನರು ಕಾವ್ಯವಾಚನ, ಪುರಾಣಶ್ರವಣ, ಹರಿಕಥೆ ಮುಂತಾದ ಸಾಧನಗಳಿಂದ ಪಡೆಯುತ್ತಿದ್ದರು. ಇಂಥ ಕಾವ್ಯಗಳ ವಾಚನ ಮತ್ತು ಶ್ರವಣಗಳಿಂದ ಮನುಷ್ಯನು ಸಂಸ್ಕಾರ ಹೊಂದಿ ಉತ್ತಮನಾಗುತ್ತಾನೆ. ಈಗಿನ ಕಾಲದವರಿಗೆ ಈ ಫಲಶ್ರುತಿಯಲ್ಲಿ ನಂಬಿಕೆ ಇಲ್ಲದಿರಬಹುದು. ಆದರೆ ಹಿಂದಿನವರಿಗೆ ಇದರಲ್ಲಿ ಅಚಲವಾದ ನಂಬಿಕೆ ಇತ್ತು.

ಜನ್ಮಾಂತರ—ಹಿಂದಿನ ಹುಟ್ಟು. ದುಷ್ಕರ್ಮ—ಕೆಟ್ಟ ಕೆಲಸ. ದುರಿತ—ಪಾಪ. ತುರಗ—ಕುದುರೆ. ನಿಚಯ—ಸಮೂಹ. ಶ್ರೀ (ಸಂ) ಸಿರಿ-ಸಂಪತ್ತು.

## ೨. ದಮಯಂತಿ ನಳನಲಿ ಚಿತ್ತವಿಟ್ಟಳು

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಸಾಮಾನ್ಯವಾಗಿ ಹದಿನೆಂಟು ವರ್ಣನೆಗಳಿರುತ್ತವೆ. ಇವುಗಳಲ್ಲಿ ಪಟ್ಟಣದ ವರ್ಣನೆ ಒಂದು. ಈ ಕಾವ್ಯ ಪುರವರ್ಣನೆಯಿಂದ ಮೊದಲಾಗುತ್ತದೆ.

೧. ವಸುಧೆ—ಭೂಮಿ. ಎಸೆ—ಶೋಭಿಸು. ಅಗಣಿತ—ಲೆಕ್ಕವಿಲ್ಲದ. ಪ್ರಕಾರ—ಕಾಂಪೌಂಡು. ಮಿಸುನಿ—ಬಂಗಾರ. ಪ್ರಭೆ—ಕಾಂತಿ. ದೇವಾಲಯಂಗಳು+ಇರ್ದುದು. ಇಲ್ಲಿ ಕರ್ತೃಪದ ಬಹುವಚನದಲ್ಲಿದೆ, ಕ್ರಿಯಾಪದ ಏಕವಚನದಲ್ಲಿದೆ. ಸಮೂಹವಾಚಕವನ್ನು ಹೇಳುವಾಗ ಈ ಪ್ರಯೋಗ ಸಾಧಾರಣವಾಗಿ ಬರುತ್ತದೆ. ಕುಮಾರವ್ಯಾಸನಲ್ಲಂತೂ ಈ ಪ್ರಯೋಗ ಸಾಮಾನ್ಯ. ಉದಾ—ಬೆರಗಾಯ್ತಖಿಳ ನಾರಿಯರು, ಪಾಂಡವರು ನಡುಗಿತು ಇತ್ಯಾದಿ. ಆಶ್ಚರ್ಯ—ಅಚ್ಚರಿ (ತ್ಭ).

೨. ತುಡುಕು—ಮುಟ್ಟು. ತೆನೆ—ಕೋಟೆಯ ಎತ್ತರವಾದ ಭಾಗ, ಬುರುಜು. ಆಳ್ವೇರಿ—ಕೋಟೆಯ ಗೋಡೆ. ಖಾತ—ಗುಂಡಿ. ಅಗಳು—ಕಂದಕ ಪಾತಾಳದ ಗುಂಡಿಯಂತಿರುವ ಕಂದಕ. ಮುಗಿಲ ತುಡುಕುವ ತೆನೆಗಳ ಆಳ್ವೇರಿಗಳು. ಪಾತಾಳಗಳ ಖಾತಗಳ ಅಗಳು ಬಳಸಿದ ಕೋಟೆ ಎಂದು ಅನ್ವಯ. ವೀಧಿ (ಸಂ)—ಬೀದಿ. ತಾರಕೆ—ನಕ್ಷತ್ರ. ಕನ್ನಡಿ ಮತ್ತು ಸಾಲುಗೊಂಬೆಗಳ ಸೊಗಸನ್ನು ವರ್ಣಿಸಲು ಕೊಟ್ಟಿರುವ ಹೋಲಿಕೆ ಸೊಗಸಾಗಿದೆ. ಒಂದು ಪದಾರ್ಥವನ್ನು ಮತ್ತೊಂದು ಪ್ರಸಿದ್ಧ ಪದಾರ್ಥದೊಡನೆ ಹೋಲಿಸುವುದಕ್ಕೆ ಉಪಮಾಲಂಕಾರವೆಂದು ಹೆಸರು. ಸೊಗಸುದೋರುವ ಕನ್ನಡಿಯ ಸಾಲುಗಳ. ಪಾ.

೩. ನಿಷಧನಗರದ ಬೀದಿಯ ಹೆಸರು. ರವಿ—ಸೂರ್ಯ. ಶಶಿ—ಚಂದ್ರ. ಹೇಮ—ಚಿನ್ನ. ಅಣೆ—ಚುಚ್ಚು, ಮುಟ್ಟು. ಭದ್ರಭವನಿಕೆ—ಮನೋಹರವಾದ ಮನೆ. ಯುವತಿ—ಹೆಂಗಸು. ರವ—ಶಬ್ದ. ರಹಿ—ಸೊಗಸು.

ನಿಷಧನಗರ ಸಂಗೀತ, ಸಾಹಿತ್ಯ, ಸಂಪತ್ತುಗಳ ನೆಲೆವೀಡಾಗಿತ್ತು.

೪. ರಿಪು—ಶತ್ರು. ತನಯ—ಮಗ. ಅಭಿಧಾನ—ಹೆಸರು. ಮೌಳಿ—ಶ್ರೇಷ್ಠ. ನಿಷಧನಗರಿಯ ದೊರೆ ಚಂದ್ರವಂಶದ ಅರಸನಾದ ವೀರಸೇನ. ಆತನ ಮಗನೇ ನಳಚಕ್ರವರ್ತಿ.

೫. ಶರಧಿ-ಸಮುದ್ರ. ಮೇರು-ಮೇರುಪರ್ವತ. ದಿಗಂತ-ದಿಕ್ಕಿನ ಕೊನೆಯವರೆಗೂ ಎಂದರೆ ಇವೇ ನಳನ ರಾಜ್ಯಕ್ಕೆ ಮೇರೆ. ಲೋಕದ ಎಲ್ಲ, ಅವನೀಶ್ವರರು—ರಾಜರು. ಧುರ—ಯುದ್ಧ. ದೋರ್ + ವ (ಬ)ಳರು—ತೋಳ ಬಲವುಳ್ಳವರು. ಮಕುಟ—ಕಿರೀಟ. ವರ್ಧನ—ಹೆಚ್ಚಿಗೆ. ಚರಣ—ಕಾಲು. ಆತನರ್ + ಆಗು—ಅಡ್ಡ ಬೀಳು.

೬. ಪ್ರಜ್ವಲಿಸು—ಶೋಭಿಸು. ಸುತ್ರಾಮ (ಇಂದ್ರ)ನ. ಪುರ—ಪಟ್ಟಣ, ಅಮರಾವತಿ. ರಾಮಣೀಯಕ—ಮನೋಹರವಾದ. ಸೌಧ—ಉಪ್ಪರಿಗೆ. ಸ್ತೋಮ—ಗುಂಪು.

೭. ವಿದರ್ಭದೇಶದ ಅರಸು ಭೀಮರಾಜ. ವಿತರಣ—ದಾನ, ಔದಾರ್ಯ. ಬಲ್ಲಿದ—ಶೂರ, ಶ್ರೇಷ್ಠ. ನಿಜಸುತರಿಲ್ಲ—ತನಗೆ ಮಕ್ಕಳಿಲ್ಲ. ಉಮ್ಮಳಿಸು—ಸಂಕಟಪಡು. ಆಖ್ಯ—ಹೆಸರು. ವರ—ಶ್ರೇಷ್ಠ.

೮. ಸಂತಾನ—ವಂಶ. ಸಂತಾಪ—ಸಂಕಟ. ಸಂತೈಸು—ಸಮಾಧಾನಪಡಿಸು. ಮಕ್ಕಳಿಲ್ಲದ ಸಂಪತ್ತು ವ್ಯರ್ಥ ಎಂಬ ಭಾವನೆ ನಮ್ಮ ನಾಡಿನಲ್ಲಿ ಮೊದಲಿನಿಂದಲೂ ಉಂಟು. ಈ ಭಾವವನ್ನು ವರ್ಣಿಸುವ ಕೆಳಗಿನ ಜನಪದ ಸಾಹಿತ್ಯದ ತ್ರಿಪದಿಗಳನ್ನು ನೋಡಿ—

ಬಾಲಕರಿಲ್ಲದ ಬಾಳಿದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ ಬಾಳೆಲೆಯು
ಹಾಸ್ಯುಂಡು ಬೀಸಿ ಒಗೆದಂಗ

ಆದ್ದರಿಂದ ಬಂಜೆಯರ ಪ್ರಾರ್ಥನೆ ಯಾವಾಗಲೂ ಇದೇ ಆಗಿರುತ್ತಿತ್ತು.

ಕಂದನ ಕುಡು ಶಿವನೆ ಬಂಧನ ಬಡಲಾರೆ
ಹಂಗೀನ ಬಾನ ಉಣಲಾರೆ ಮರ್ತ್ಯದಾಗೆ
ಬಂಜೆಂಬ ಶಬುದ ಹೊರಲಾರೆ

೯. ಋಷಿಗಳಿಗೆ ಹಿಂದಿನ ಮತ್ತು ಮುಂದಿನ ವಿಷಯಗಳು ತಿಳಿದಿರುತ್ತ

ದೃಷ್ಟಿ—ನೋಟ. ಅರಿ—ತಿಳಿ. ವರಸುತಯಾಗ—ಒಳ್ಳೆಯ ಮಗನನ್ನು ಕೊಡುವ ಯೋಗ. ಗರುವ—ಶ್ರೇಷ್ಠ. ಸರಾಗ—ಸಂತೋಷ. ಸುಲಗ್ನ—ಒಳ್ಳೆಯ ಮುಹೂರ್ತ.

೧೦. ಸಮನಂತರ—ತರುವಾಯ. ತನುಜೆ—ಮಗಳು. 'ಲೋಕೈಕ ಸುಂದರಿಯು' ಪಾ.

೧೧. ಅಮರ—ದೇವತೆ. ಮೊಳಗು—ಶಬ್ದಮಾಡು. ಇಳೆ—ಭೂಮಿ. ಸಂಭ್ರಮಿಸು—ಸಡಗರಿಸು, ಸಂತೋಷಪಡು. ಅಭಿನಮಿಸು—ಅಡ್ಡಬೀಳು. ಒರೆ—ಹೇಳು. ಹೊರವಂಟನು—ಹೊರಟನು. ಪೊರಮಡು (ಧಾತು).

೧೨. ಈ ಪದ್ಯದಲ್ಲಿ ದಮಯಂತಿಯ ಚೆಲುವಿಕೆಯ ವರ್ಣನೆ ಇದೆ. ನಿರಿ—ಗುಂಗುರು, ಸುಂದರ. ಕುರುಳು—ಕೂದಲು. ಸಿರಿಮುಡಿ—ತುಂಬು ಕೂದಲು. ಪವಳ (ಪ್ರವಾಳ—ಸಂ) + ಅಧರ= ಹವಳದಂತೆ ಕೆಂಪಾದ ತುಟಿ. ಇಲ್ಲಿ ಸಂಧಿಯೂ ಆಗಕೂಡದು, ಸಮಾಸವೂ ಆಗಕೂಡದು. ಇದು ಅರಿಸಮಾಸವಾದರೂ ಪೂರ್ವಕವಿಪ್ರಯೋಗ. ತುಟಿಗಳನ್ನು ಹವಳಕ್ಕೆ ಹೋಲಿಸುವುದು ನಮ್ಮಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿದೆ. 'ಅಳುವ ಕಂದನ ತುಟಿಯು ಹವಳದ ಕುಡಿಹಾಂಗ'—ಜನಪದ ಸಾಹಿತ್ಯ. ಕಂಬು—ಶಂಖ. ತರಳನಯನ—ಚಂಚಲವಾದ ಕಣ್ಣು. ನಾಸಿಕ—ಮೂಗು. ಪೆರೆನೊಸಲು—ಚಂದ್ರನಂತೆ ಹಣೆ. ಹರಿ—ಜಿಂಕೆ. ಮಧ್ಯ—ನಡು, ಸೊಂಟ. ಗಮನ—ನಡಗೆ. ಗುರು + ಕುಚ—ದೊಡ್ಡ ಮೊಲೆ. ಪಲ್ಲವ—ಚಿಗುರು. ಹೆಂಗಸರಿಗೆ ಗುಂಗುರು ಕೂದಲು, ತುಂಬುಮುಡಿ. ಹವಳದಂತೆ ಕೆಂದುಟಿ, ಚಂಚಲವಾದ ಕಣ್ಣು, ಸಂಪಿಗೆ ಹೂವಿನಂತೆ ಮೂಗು, ಬಡನಡು, ಮೃದುವಾದ ನಡಗೆ—ಇವೆಲ್ಲ ಸೌಂದರ್ಯದ ಲಕ್ಷಣಗಳೆಂದು ನಮ್ಮವರ ಭಾವನೆ.

೧೩. ದಮಯಂತಿ ಸುಂದರಿಯೂ ಹೌದು; ಗುಣವತಿಯೂ ಹೌದು. ಶೀಲ—ನಡತೆ. ಸ್ತ್ರೀಯರಿಗೆ ನಡತೆಯೇ ಶ್ರೇಷ್ಠಭೂಷಣ (ಶೀಲಂ ಪರಂ ಭೂಷಣಂ) ಭಣಿತೆ—ರೀತಿ. ಪ್ರಣುತಿಸು—ಹೊಗಳು. ಶರ್ವಾಣಿ—ಪಾರ್ವತಿ. ರತಿ—ಕಾಮನ ಹೆಂಡತಿ. ಎಣೆ—ಸಮಾನ. ಮಿಕ್ಕಿನ—ಉಳಿದ. ಬಣಗು—ಸಾಮಾನ್ಯ.

೧೪. ಪ್ರಸಂಗ—ಸಂಭಾಷಣೆ.

೧೫. ವನಜ—ಕಮಲ. ವನ—ನೀರು. ವಾರ್ತೆ—ಸಮಾಚಾರ. ವ್ಯ... ಕೆಲಸ. ಚಿತ್ತ—ಮನಸ್ಸು. ಸಂಜನಿಸು—ಹುಟ್ಟು. ಮೋಹ—ಪ್ರೀತಿ.

೧೬. ಮೃಗಿಸು—ನೋಡು. ಎಳದು+ಪೆ(ಹೆ)ಣ್—ಎಳವೆಣ್.

—ಮನ್ಮಥ. ಎಸುಗೆ—ಬಾಣಪ್ರಯೋಗ. ದಮಯಂತಿಯ ವಿರಹದ ವರ್ಣನೆ ಇಲ್ಲಿದೆ.

೧೭. ಅಂತರಂಗ—ಮನಸ್ಸು. ಬಲಿದ—ಹೆಚ್ಚಾದ. ವಿರಹ—ಅಗಲಿಕೆ. ರಾಜ+ವದನೆ—ಚಂದ್ರಮುಖಿ, ಹೊಳಲು—ಪಟ್ಟಣ. ಸು+ರುಚಿರ—ಮನೋಹರವಾದ. ಪುಷ್ಪ—ಹೂ. ತರು—ಮರ. ಎಳದು+ತಳಿರ್—ಎಳೆಯ ಚಿಗುರು. ಅಲರು—ಹೂ. ನಲವು—ಸಂತೋಷ.

೧೮. ವಿಶಾಲವಾಗು—ಹೆಚ್ಚಾಗು. ಕವಿಗೆ ಈ ಪದದ ಮೇಲೆ ಮಮತೆ ಹೆಚ್ಚು.

೧೯. ಭೂ+ಸುರ—ಭೂಮಿಗೆ ದೇವತೆ, ಬ್ರಾಹ್ಮಣ. ಏಸು—ಎಷ್ಟು.

೨೦. ಬಣ್ಣಿಸಲ್+ಆಗ—ವರ್ಣಿಸಲು ಆಗುವುದಿಲ್ಲ. ದಮಯಂತಿಯ ರೂಪು ಮಾತಿನ ಮಾಲೆಗೆ ನಿಲುಕದು ಎಂದರ್ಥ. ಯುವತಿ—ಸ್ತ್ರೀ. ಬಗೆ—ರೀತಿ. ಭಾವಿಸು—ಯೋಚಿಸು. ಆಕಾರ, ಸವಿನುಡಿ, ನಯ ಇವುಗಳಿಂದ ಕೂಡಿದ ದಮಯಂತಿಗೆ ಸಮಾನರು ಬೇರೊಬ್ಬರಿಲ್ಲ.

೨೧. ನಳನ ರೂಪು, ಗುಣಗಳನ್ನು ಕೇಳಿ ದಮಯಂತಿಗೆ ಅವನಲ್ಲಿ ಮೋಹ ಹುಟ್ಟಿದಂತೆ, ನಳನಿಗೂ ಆವಳ ರೂಪ ಗುಣಾತಿಶಯಗಳನ್ನು ಕೇಳಿ ಆವಳಲ್ಲಿ ಮೋಹ ಹುಟ್ಟಿತು. ನೈಷಧ—ನಳ. ಆಲಿ—ಕಣ್ಣು. ಪುಷ್ಪ+ಶರ+ಆಳಿ—ಹೂ ಬಾಣಗಳ ಸಮೂಹ. ಲೋಲ—ಚಂಚಲವಾದ. ಲೋಚನೆ—ಕಣ್ಣುಳ್ಳವಳು. ತನಗೆ+ಅಹಳು—ತನಗೆ ವಶಳಾಗುತ್ತಾಳೆ.

೨೨. ಸವಿಮಾಡಿ—ಮನಸ್ಸಿನಲ್ಲಿಯೇ ಸವಿದು. (ಈ ಪ್ರಯೋಗವನ್ನು ಗಮನಿಸಿ. ಇದರಂತೆಯೇ ರಾಜ್ಯಮಾಡು, ಸಂಸಾರಮಾಡು ಇತ್ಯಾದಿ) ಹೊಂಪುಳಿ—ರೋಮಾಂಚ. ಸಂತೋಷಕಾಲದಲ್ಲಿ ಮೈಮೇಲಿನ ಕೂದಲು ಎದ್ದು ನಿಲ್ಲುವುದು. ಈಡಾಗು—ಗುರಿಯಾಗು. ಕಾಮದಿಂದ ತಪಿಸು. ವ್ಯಸನ(ಸಂ)—ಬೆಸನ; ಚಿಂತೆ. ಕಾಯ—ದೇಹ.

೨೩. ಮೃಗಘನ—ದುಷ್ಟ ಮೃಗಗಳ ತೊಂದರೆ ಹೆಚ್ಚು. ಗಮಿಸಬೇಕು—ಹೋಗಬೇಕು. ಶಬರ—ಬೇಡ. ಅಸ್ತ+ಅಂಬುಧಿ—ಸೂರ್ಯ ಮುಳು-ಗುವ ಸಮುದ್ರ. ಇನ—ಸೂರ್ಯ.

೨೪. ನಳಿನ—ಕಮಲಗಳಿಗೆ, ಸಖ—ಸ್ನೇಹಿತ, ಸೂರ್ಯ. ಉದಯ ಹುಟ್ಟುವಿಕೆ. ದಳ—ಸೈನ್ಯ. ಕೈದು—ಆಯುಧ. ಕಣ್ಣಿ—ಹಗ್ಗ. ...ತರು ಮೆರೆದುದು. ಕರ್ತೃಪದ ಇಲ್ಲಿ ಪುಲ್ಲಿಂಗದ ಬಹುವಚನದ ...ಾಪದ ನಪುಂಸಕಲಿಂಗದ ಏಕವಚನದಲ್ಲಿದೆ: ಸಮೂಹ ವಾಚಕ

ಈ ಪ್ರಯೋಗ ಉಂಟು. ಒಂದನೆಯ ಪದ್ಯವನ್ನು ನೋಡು.

೨೫. ಶಿರೋಮಣಿ—ಶ್ರೇಷ್ಠ. ರತ್ನ—ರತುನ (ಹಳಗನ್ನಡದಿಂದ ನಡುಗನ್ನಡಕ್ಕೆ ಬರುವಾಗ ವಿಜಾತೀಯ ಒತ್ತಕ್ಷರಗಳು ಬಿಡಿಬಿಡಿಯಾಗುತ್ತವೆ. ಉದಾ—ಭಕ್ತ—ಭಕುತ.) ಅಂಬರ—ಬಟ್ಟೆ. ಸಂದಣಿಸು—ಒಟ್ಟಾಗು. ಮೋಹರ—ಸೈನ್ಯ.

೨೬. ಮೃಗಗಳ, ತತಿ—ಸಮೂಹ. ಕಾನನ—ಕಾಡು. ಬಳಸು—ಸುತ್ತುಗಟ್ಟು. ಆನು—ಎದುರಿಸು. ಘಲ್ಲಣೆ—ಪ್ರತಾಪ, (?) ತರುಬು—ಅಡ್ಡಗಟ್ಟು.

೨೭. ತತ್+ಪುರ—ಆ ಪಟ್ಟಣ. ವಳಯ—ಪ್ರದೇಶ. ಜಾನು—ಮೊಳಕಾಲು. ಜಂಘೆ—ತೊಡೆ. ಪರಿಹೃತ—ಕಳೆದುಕೊಂಡ. ಶ್ರಮನಾಗಿ—ಆಯಾಸವುಳ್ಳವನಾಗಿ.

೨೮. ಸ್ಥಾನ—ಠಾಣ (ದ್ಭ). ತರು—ಮರ. ಏಕವೃಕ್ಷ—ಒಂದು ಮರ. ಇರ್ಕೆ=ಇಕ್ಕೆ=ಸ್ಥಳ. ಕಮಲಜ—ಬ್ರಹ್ಮ. ವ್ಯಾಕುಲ—ತೊಂದರೆ; ಇಲ್ಲಿ ನಿದ್ರೆಯ ಭಾರ ಎಂದರ್ಥ. ತುರಗ—ಕುದುರೆ; ಇಲ್ಲಿ ವಾಹನ ಎಂದು ಅರ್ಥವಿರಬಹುದು. ದಿವಾಕರ—ಸೂರ್ಯನಂತೆ, ಉನ್ನತ—ಶ್ರೇಷ್ಠವೂ ಮತ್ತು ಶುಭ್ರವೂ ಆದ ತೇಜಸ್ಸುಳ್ಳ.

೨೯. ಇಲ್ಲಿ ನಳನು ಕಂಡ ರಾಜಹಂಸದ ವರ್ಣನೆ ಇದೆ. ಅರುಣ—ಕೆಂಪು. ಆನನ—ಮುಖ. ಯುಗ—ಎರಡು. ಧವಳ—ಬಿಳಿಯ. ಆಯತ—ವಿಸ್ತಾರ, ಇಲ್ಲಿ ವಿವರ ಎಂದು ಅರ್ಥ. ಅಳ್ಕರು > ಅಕ್ಕರು—ಪ್ರೀತಿ.

೩೦. ಹಸ್ತ—ಕೈ. ವದನ—ಮುಖ. ಮದ+ಕರಿ—ಮದಿಸಿದ ಆನೆ, ಮದ್ದಾನೆ. ಅಂತರ—ವ್ಯತ್ಯಾಸ, ಜೊತೆ. ಕೈ ಸದರದವರು—ಕೈಗೆ ಸಿಕ್ಕುವವರು. ಸದರ—ಸಲುಗೆ. ಅರಿದು—ಅಸಾಧ್ಯ. ಪಕ್ಷಿ ನಳನಿಗೆ ಹೇಳುವ ಮಾತು, ಅದರಲ್ಲಿರುವ ನೀತಿಯನ್ನು ಗಮನಿಸಿ.

೩೧. ಬಡಬ—ಸಮುದ್ರದ ನಡುವೆ ಇರುವ ಬೆಂಕಿ. ಪ್ರಳಯಕಾಲ[illegible]ಲಿ ಇದು ಸಮುದ್ರದ ನೀರನ್ನೆಲ್ಲಾ ಕುಡಿಯುವುದೆಂದು ಪುರಾಣದಲ್ಲಿ ಸು[illegible]ದೆ. ಕುಡಿತೆ—ಒಂದು ಗುಕ್ಕು. ಭುಂಜಿಸು—ತಿನ್ನು. ಆಪ್ಯಾಯನ [illegible] ಪೃಥ್ವೀ (ಸಂ)—ಪೊಡವಿ. ಒರಲು—ಕೂಗು. ಒಡಲು—ಹೊಟ್ಟೆ. [illegible] ಬೊಗಸೆ ಹಾಲಿನಿಂದ ಬಡಬಾಗ್ನಿ, ಮಂಜಿನಿಂದ ಕೆರೆ ಹೇಗೆ ತೃಪ್ತಿ[illegible]ದವೋ ಹಾಗೆಯೇ ನನ್ನನ್ನು ಕೊಂದು ತಿನ್ನುವುದರಿಂದ ನಿನಗೆ ತೃಪ್ತಿ [illegible]ು. ಉದ್ದಾಹರಣೆಗಳಿಂದ ವಿಷಯವನ್ನು ವಿವರಿಸುವುದು ದೃಷ್ಟಾಂ[illegible]

ಲಂಕಾರ. 'ಸುತರುಮ್ಮಳವ' ಪಾ.

೩೩. ನಿಬ್ಬರ—ಹೆಚ್ಚಾಗಿ. ಈ ಸ್ಥಿತಿಯಲ್ಲಿರುವವರನ್ನು ಕೊಲ್ಲಕೂಡ ದೆಂದು ಧರ್ಮಶಾಸ್ತ್ರದಲ್ಲಿ ಹೇಳಿದೆ.

೩೪. ಆಲಯ—ಮನೆ. ವಂದಿಸು—ನಮಸ್ಕರಿಸು.

೩೫. ಅಸು—ಪ್ರಾಣ. ಸಾರಹೃದಯ—ಒಳ್ಳೆಯ ಮನಸ್ಸುಳ್ಳವ. ಅರುಹು—ಹೇಳು. ಸು+ಕೃತ—ಒಳ್ಳೆಯ ಕೆಲಸ, ಪುಣ್ಯ.

೩೬. ಸೊಬಗಿನ ಸೊನೆ—ಚೆಲುವಿಕೆಯ ಮಳೆ (ಸೋನೆಮಳೆ). ಅಕ್ಷಿ—ಕಣ್ಣು.

೩೭. ಕ್ಷಿತಿ—ಭೂಮಿ. ವಿತಳ—ಪಾತಾಳ. ಪ್ರತಿಯ—ಬೇರೆಯವಳನ್ನು. ಪಾಸಟಿ—ಸಮಾನ.

೩೮. ಸವಡಿನುಡಿ—ಸುಳ್ಳುನುಡಿ. ಹೇವರಿಸಿ—ನಾಚಿ. ದಮಯಂತಿಯ ವಿಷಯವನ್ನು ಕೇಳಿ ಸಂತೋಷಗೊಂಡ ನಳನಿಗೆ ಅವಳ ವಿಷಯವಾಗಿ ಹಂಸೆಗೆ ಹೇಳಲು ನಾಚಿಕೆಯಾಯಿತು. ಆದರೂ ವಿರಹ ಅವನನ್ನು ನುಡಿಯುವಂತೆ ಮಾಡಿತು. ಖ—ಆಕಾಶದಲ್ಲಿ, ಗ—ಹೋಗತಕ್ಕದ್ದು, ಪಕ್ಷಿ.

೩೯. ಮನಸಿಜ—ಮನ್ಮಥ. ಶರದ ಹತಿ—ಬಾಣದ ಹೊಡೆತ. ವನ—ಬನ (ದ್ಭ)

೪೦. ಸರಾಗ—ಸಂತೋಷ. ಲತಾಂಗಿ—ಬಳ್ಳಿಯಂತೆ ದೇಹವುಳ್ಳವಳು, ಹೆಂಗಸು. ಕೀರ್ತಿ ಬೆಳ್ಳಗಿರುವುದೆಂದು ಕವಿಗಳ ಹೇಳಿಕೆ. ನಳನ ಕೀರ್ತಿಯಷ್ಟೇ ಶುಭ್ರವಾಗಿತ್ತು ರಾಜಹಂಸ. ಮರಾಳ—ಹಂಸ, ಗಗನ—ಆಕಾಶ.

೪೧. ಕನಕ—ಬಂಗಾರ. ನಿರ್ಮಿತ—ಮಾಡಿದ. ಸಂದೋಹ—ಗುಂಪು. ಅಂಗನೆ—ಹೆಂಗಸು. ಮೊನೆಯಲಗು—ಚೂಪಾದ ಬಾಣ.

೪೨. ಮೊಗ—(ಸಂ) ಮುಖ. ಚೆಲುವನೀಕ್ಷಿಸಿ, ಪಾ. ದಮಯಂತಿ ಪಕ್ಷಿಯನ್ನು ನೋಡಿ, ಆಮೇಲೆ ಸಖಿಯರ ಮುಖ ನೋಡಿ, ಅವರಿಗೆ ಅದರ ಸೊಗಸನ್ನು ವರ್ಣಿಸಿ ಹಿಡಿಯಲು ಹೋದಳೆಂದು ಭಾವ.

೪೩. ಕುಸುಮ—ಹೂ. ಅಂಗೈಸು—ಆಸೆಪಡು.

೪೪. ಮೇಲುದು—ಸೆರಗು. ಮುಕ್ತಾಹಾರ—ಮುತ್ತಿನ ಸರ. ವಡಿಸು—ಸರಿಪಡಿಸಿಕೊಳ್ಳು. ಬೆಚ್ಚನೆ (ಬಿಸಿದು) + ಸುಯ್—ನಿಟ್ಟು

೪೫. ಸರೋರುಹಗಂಧಿ—ಸುವಾಸನೆಯುಳ್ಳವಳು, ಹೆಂಗಸು. ಚ

೪೬. ಮಾಣು—ನಿಲ್ಲು. ಅಂಬರ—ಆಕಾಶ.

೪೬. ನಳಕೂಬರ—ಕುಬೇರನ ಮಗ. ಜಯಂತ—ಇಂದ್ರನ ಮಗ. ಪ(ಹ)ಳಿ—ನಿಂದಿಸು, ತಿರಸ್ಕರಿಸು.

೪೮. ಬಾಹಿರ—ಹೊರಗಾದವನು. ಪಾತಕಿ ಎಂಬುದು ಸರಿಯಾದ ರೂಪ. ಆದರೆ ಕವಿಪ್ರಯೋಗವೇ ಪಾತಕ (ಪಾಪಿ) ಎಂದಿರಬಹುದು.

೪೯. ಎಸಗು—ಮಾಡು. ವಿರಹ—ಅಗಲಿಕೆ. ಕರೆಕರೆ—ದುಃಖ.

೫೦. ಭ್ರಮಣೆ—ಹುಚ್ಚು? ಎಳದಾಗು—ಕುಗ್ಗು. ಪಿತ—ತಂದೆ.

೫೧. ಮಾಳ್ಪೆನ್—ಮಾಡುವೆನು.

೫೨. ಸಂತವಿಡು—ಸಮಾಧಾನಪಡಿಸು.

೫೩. ಮಂದ+ಗಮನೆ-ಮೆಲ್ಲಗೆ ಅಡಿಯಿಡುವವಳು, ಹೆಂಗಸು.

೫೪. ಗುಡಿ—ಬಾವುಟ. ಧ್ಯಾನಿಸು (ಪಾ)—ಜಾನಿಸು (ದ್ಭ) ಚಿಂತಿಸು.

೫೫. ಹಳುವ—ಕಾಡು.

೫೬. ಕೇಳ (ಸ್ನೇಹ?). ಮೇಳ (ಸಭೆ). ವಿನೋದಗಳ ವಿಭವ—ಸೊಗಸು.

## ೩. ಅರಸನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ

೧. ಹದನು—ಸ್ಥಿತಿ. ಗೋಚರಿಸು—ಕಾಣಿಸಿಕೊಳ್ಳು. ದ್ರವ—ನೀರು' ಇಲ್ಲಿ ಜೊಲ್ಲು. ಬಲಿದ+ಅವಸ್ಥೆ—ಹೆಚ್ಚಾದ ಮಿತಿಮೀರಿದ ಸ್ಥಿತಿ. ವಿರಹಿಗಳಿಗೆ ಹತ್ತು ತೆರನಾದ ಸ್ಥಿತಿಗಳುಂಟಾಗುವುದೆಂದು ಹೇಳಿದೆ. ನಳನ ರೂಪದ ವರ್ಣನೆಯನ್ನು ಕೇಳಿಯೇ ದಮಯಂತಿಯ ಸ್ಥಿತಿ ಈ ರೀತಿಯಾಯ್ತು. ಅವನನ್ನೇ ನೋಡಿದರೆ ಅವಳ ಸ್ಥಿತಿ ಇನ್ನೇನಾಗುವುದೋ!

೨. ಉಳಿ—ಬಿಡು. ದಮಯಂತಿಗೆ ನಿದ್ರೆ ಬಾರದಾಯಿತು ಎಂದು ಭಾವ. ಹೊಲಬು—ದಾರಿ. ದಮಯಂತಿಯ ಕನಸಿನ, ಮನಸ್ಸಿನ ಮತ್ತು ಕಣ್ಣಿನ ತುಂಬ ನಳನೇ ಆದನು. ನಿಲುಕಿ—ನಿಟ್ಟಿಸಿ. ಕೆಳದಿ—ಸಖಿ.

೩. ತೆತ್ತಿಹಳು—ಗುರಿಮಾಡಿದ್ದಾಳೆ. ಈ ಪದ್ಯದ ಪಾಠ ನೇರವಾಗಿಲ್ಲ.

೪. ಆತ್ಮಜೆ—ಮಗಳು. ಏಳಿಗೆ—ಅಭಿವೃದ್ಧಿ. ಓಲೆ—ಕಾಗದ.

೫. ಅರಸನ+ಆಳು—ರಾಜಸೇವಕರು. ಶೃಂಗಾರ (ಸಂ)—ಸಿಂಗರ+ಇಸು—ಅಲಂಕಾರಮಾಡು.

೬. ಪುತ್ಥಳಿ—ಗೊಂಬೆ. ಓರಣ—ಸಾಲು. ಲೋಪೆ—ಸೂರು. [illegible]ಸಿಲೆ—ಒಂದು ಆಭರಣ.

೮. ಆಸುರ—ಅತಿಶಯ. ಒಗ್ಗು—ಸಮೂಹ. ವಾಸವ—ಇಂದ್ರ.

ಪಠಣವಿಲಾಸಗಳ ವೀಣೆಯಲಿ ; ವೀಣೆಯ ಭಾಸುರದ ಕರದಲಿ ಪಿಡಿದು ಪಾ.

೯. ಉರ್ವಿ—ಭೂಮಿ. ಸು+ಶೀಲ—ಒಳ್ಳೆಯ ನಡತೆ. ವಿಸ್ತರಿಸು (ಸಂ)—ಬಿತ್ತರಿಸು. ಪಾಕಶಾಸನ—ಇಂದ್ರ.

೧೦. ಸಮತಳಿಸು—ಪ್ರಾಪ್ತವಾಗು. ದಮಯಂತಿಗೆ + ಯೌವನ—ಛಂದಸ್ಸಿಗಾಗಿ ಈ ರೀತಿ ಸಂಧಿಯಾಗಿದೆ. ಸೊಯಂವರ—ಸ್ವಯಂವರ. ನೆರೆದ ರಾಜಕುಮಾರರಲ್ಲಿ ತಾನೇ ಗಂಡನನ್ನು ಆರಿಸಿಕೊಳ್ಳುವುದು.

೧೧. ನಾರದನ ಕೈ ಚಿಗುರಿನಂತೆ ಮೃದುವಾಗಿತ್ತೆಂದು ಭಾವ.

೧೨. ಉರುತರ—ಶ್ರೇಷ್ಠ. ಅಬಲೆ—ಹೆಂಗಸು.

೧೩. ಸ್ಮರ—ಮನ್ಮಥ, ಕಾಮ.

೧೪. ಶಶಿ + ಕುಲ + ಉದ್ಭವ—ಚಂದ್ರ ವಂಶದಲ್ಲಿ ಹುಟ್ಟಿದವನು. ಭರವಸೆ—ನಂಬಿಕೆ.

೧೫. ಕರಿಗಮನ—ಆನೆಯ ಮೇಲೆ ಹೋಗುವವನು, ಇಂದ್ರ.

೧೬. ಪಿತೃಪತಿ—ಯಮ. ಅದೃಶ್ಯವರ—ಯಾರಿಗೂ ಕಾಣದಂತಾಗುವ ವರ. ತಳೋದರಿ—ಹೆಂಗಸು.

೧೯. ನಳನಿಗೆ ಎಂಥ ಕಷ್ಟ ಬಂತು ! ದಮಯಂತಿ ತನ್ನನ್ನೇ ಒಲಿದಿರುವಳೆಂದು ಅವನಿಗೆ ಗೊತ್ತು. ಹಾಗಿರುವಲ್ಲಿ ತಾನೇ ಹೋಗಿ ದಮಯಂತಿಗೆ ದೇವತೆಗಳನ್ನು ಪ್ರೀತಿಸು ಎಂದು ಹೇಗೆ ಹೇಳುವುದು ? ಆದರೆ ಹಾಗೆ ಹೇಳದಿದ್ದರೆ ವಿಧಿ ಇಲ್ಲ. ಏಕೆಂದರೆ ತಮ್ಮ ಮಾತನ್ನು ಕೇಳದ ದೇವತೆಗಳು ನಳನಿಗೆ ಶಾಪವನ್ನು ಕೊಡಬಹುದು.

೨೦. ಹಿಂದುಗಳೆ—ಹಿಂದೆಗೆ, ತಿರಸ್ಕರಿಸು. ಖತಿ—ಕೋಪ.

೨೧. ಹೆಂಗಸರು ಯಾವ ಕೆಲಸ ಮಾಡಲೂ ಹಿಂದೆಗೆಯುವುದಿಲ್ಲ. ಹೆಂಗಸರ ವಿಷಯವಾಗಿ ಅಷ್ಟೇನೂ ಹಿತವಲ್ಲದ ಕವಿಯ ಭಾವವನ್ನು ಈ ಪದ್ಯದಲ್ಲಿ ಕಾಣಬಹುದು. "ಸ್ತ್ರೀಚರಿತಮದೇಂ ತಿಳಿಯಲರಿದು ಪೆಂಡಿರ ಕೃತಕಂ," "ಲೋಕದಲಿ ಹೆಣ್ಣನು ನಂಬಿದವ ಕೆಟ್ಟ ಸರ್ವಜ್ಞ" ಇವೇ ಮೊದಲಾದ ಕವಿಯ ಉಕ್ತಿಗಳನ್ನು ನೆನೆಯಿರಿ. ಆದರೆ ಈಗ ಕಾಲ ಬದಲಾಗಿದೆ. ವಾವಿ—ಸಂಬಂಧ. ವರ್ತನೆ—ನಡತೆ. ಪಾವಕ—ಅಗ್ನಿ.

೨೨. ಪ್ರಭೆ—ಕಾಂತಿ. ಅಲಘು + ಭುಜ + ಬಲ—ಹೆಚ್ಚಾದ ತೋಳ್ಬಲವುಳ್ಳವನು.

೨೩. ವೇದಿಕೆ—ಜಗುಲಿ. ಕೈದು—ಆಯುಧ. ಕಾಪು (ಹ)—ರಕ್ಷಣೆ (ಕಾತು). ದಾರವಟ್ಟ—ದ್ವಾರಪಟ್ಟ(ಸಂ)—ಹೆಬ್ಬಾಗಿಲು.

೨೪. ಚಿತ್ರದ ಬಾಗಿಲು—ಬಹುಶಃ ಅರಮನೆಯಲ್ಲಿದ್ದ ಚಿತ್ರಗಳಿಂದ ಕೂಡಿದ್ದ ಒಂದು ಬಾಗಿಲಾಗಿರಬೇಕು. ಗರುವೆ—ಶ್ರೇಷ್ಠಳು. ಪೂ+ಕಣೆಯನ್—ಹೂವಿನ ಬಾಣವುಳ್ಳವನು, ಮನ್ಮಥ. ದಮಯಂತಿಗೆ ಯಾವಾಗಲೂ ನಳನ ಚಿಂತೆಯೇ. ಈ ಸಮಯದಲ್ಲಿಯೇ ಇಂದ್ರ ಕಳುಹಿದ ಸುರಸತಿಯರು ಬರುತ್ತಾರೆ.

೨೬. ದಮಯಂತಿ ದೇವೇಂದ್ರನನ್ನು ಮೋಹಿಸುವಂತೆ ಮಾಡಲು ಅವರು ಅನೇಕ ಪ್ರಲೋಭಗಳನ್ನು ಒಡ್ಡುತ್ತಾರೆ. ಮೊದಲು ಭಾಷಣ, ಆಮೇಲೆ ಸುರಪದವಿ, ಆಮೇಲೆ ದೇವೇಂದ್ರನೇ ಆಕೆಯನ್ನು ಮೋಹಿಸುವುದು ಇತ್ಯಾದಿ. ಆಯತ—ವಿಸ್ತಾರವಾದ, ತುಂಬಿದ. ಕಾಯಜ—ಮನ್ಮಥ. ಮನುಷ್ಯಲೋಕದ ರಾಜರ ಸಿರಿ ಮತ್ತು ಆಯುಷ್ಯ ಬಹಳ ಕಾಲ ಇರತಕ್ಕದಲ್ಲ, ಅಸ್ಥಿರ. ನಚ್ಚು—ನಂಬು.

೨೭. ಅರಿಯದು—ಅಸಾಧ್ಯ. ಸುದತಿ—ಒಳ್ಳೆಯ ಹಲ್ಲುಳ್ಳವಳು, ಸುಂದರಿ. ರಂಭೆಯರು—ರಂಭೆಯಂತೆ ಸುಂದರಿಯರು.

೨೮. ಹೂವಿನ ವಾಸನೆಯನ್ನು ಹಿಡಿದು, ಅದರ ಬಳಿಗೆ ದುಂಬಿಗಳು ಹೋಗುವುದು ಲೋಕರೂಢಿ. ಹಾಗಲ್ಲದೆ ದುಂಬಿಗಳ ಸಮೀಪಕ್ಕೇ ಹೂವು ಹೋಗುವುದೇ ? ಅಲರು—ಹೂವು, ಹೋದಂದದಲಿ—ಹೋಗುವಂತೆ. ವಿಕಸಿತ—ಅರಳು, ಅಳಿ—ದುಂಬಿ. ದೇವೇಂದ್ರನ ಐಶ್ವರ್ಯಪದವಿಯನ್ನು ಮೋಹಿಸಿ ನೀನೇ ಅವನ ಬಳಿಗೆ ಹೋಗಬೇಕು. ಹಾಗಲ್ಲದೆ ದೇವೇಂದ್ರನೇ ನಿನ್ನ ಬಳಿಗೆ ಬಂದನೆಂದರೆ ಅದು ಪುಣ್ಯವಲ್ಲವೆ ? ಸಲೆ ತವಕದಿಂದ ಅಮರಪತಿಯ ಎಡೆಗೆ (ಸಮೀಪಕ್ಕೆ) ಒಲಿದು ನೀ ಹೋಹಂತೆ (ಇದು ಲೋಕರೂಢಿ; ಆದರೆ ಇಲ್ಲಿ ಅದು ಬದಲಾಗಿದೆ) ನಲವಿನಿಂದಲಿ ಸುರಪತಿ ನಿನ್ನ ಬಳಿಗೆ ಐದುವನು ಇದು (ನಿನ್ನ) ಪುಣ್ಯ—ಅನ್ವಯ.

೨೯. ದಮಯಂತಿಯ ಚಿತ್ತಸ್ಥೈರ್ಯ ಇಲ್ಲಿ ಚೆನ್ನಾಗಿ ಪ್ರಕಟವಾಗಿದೆ. ಅನಿಮಿಷ—ರೆಪ್ಪೆ ಹೊಡೆಯದವ, ದೇವತೆ. ಮರಳಿಪಡೆ—ಹಿಂದಿರುಗಿಸಬೇಕಾದರೆ. ಕಮಲಾಕ್ಷ—ವಿಷ್ಣು. ಅಳವು—ಶಕ್ತಿ. ದೇವತೆಗಳು ಮನುಷ್ಯಸ್ತ್ರೀಗೆ ಆಸೆಪಡುವುದು ಆಸೆಯಲ್ಲ, ದುರಾಶೆ. ಅದು ಅಧಃಪತನ !

೩೧. ಮುಕ್ತಾಫಲ—ಮುತ್ತು.

೩೨. ದ್ವಾರ—ಬಾಗಿಲು. ಅಣ್ಮು—ಸಮರ್ಥನಾಗು.

೩೩. ನಳನು ದಮಯಂತಿಯನ್ನು ಇಂದ್ರನಿಗಾಗಿ ಒಲಿಸಲು ಮಾಡುತ್ತಿರುವ ಯತ್ನವನ್ನೂ, ಅದಕ್ಕೆ ದಮಯಂತಿ ಅವನಿಗೆ ಕೊಟ್ಟ ಉತ್ತರವ...

ಮುಂದೆ ವಿವರಿಸಿದೆ. ನಳನೆದುರಿಗೇ ದಮಯಂತಿ ತನ್ನ ಮನೋನಿರ್ಧರವನ್ನು ಹೇಳುವುದರಿಂದ ದಮಯಂತಿಯ ಸ್ಥೈರ್ಯ, ನಳನಲ್ಲಿ ಆಕೆಗಿರುವ ಅಚಲವಾದ ಪ್ರೀತಿ ನಳನಿಗೇ ಗೊತ್ತಾಗುವುದು.

೩೪. ದೊಡ್ಡವರಿಗೆ ಈ ಮಾತು ಸಲ್ಲದು. ಸುರಚರರಲ್ಲ—ದೇವತೆಗಳ ದೂತರಲ್ಲ.

೩೫. ಕುಲಗೋತ್ರ—ವಂಶ. ಖ್ಯಾತ—ಹೆಸರಾದ. ಕೃತ್ಯ—ಮಾಡಿದ. ಕೊನೆಯ ಎರಡು ಸಾಲುಗಳಲ್ಲಿ ನಳನು ದಮಯಂತಿಯನ್ನು ಪುಸಲಾಯಿಸುವ ರೀತಿಯನ್ನು ನೋಡಿ. ಪುರುಹೂತ—ಇಂದ್ರ.

೩೬. ನಳನೂ ನಿನಗೆ ಒಲಿಯತಕ್ಕವನಲ್ಲ. ಅವನೇನು ರಾಜರಲ್ಲಿ ಶ್ರೇಷ್ಠನೇ ! ಧಾತ್ರೀಶ—ರಾಜ. ಅಗ್ಗಳ—ಶ್ರೇಷ್ಠ. ಅಂತರ—ಸಮಾನ. ಕನಲು—ಕೋಪಗೊಳ್ಳು.

೩೭. ನಳನ ಮಾತಿಗೆ ದಮಯಂತಿ ಕೊಟ್ಟ ಉತ್ತರ ಸ್ವಾರಸ್ಯವಾಗಿದೆ. ಹಿಮ—ತಂಪಾದ, ಕರ—ಕಿರಣವುಳ್ಳವ, ಚಂದ್ರ. ಸಾರ್ವಭೌಮ—ಚಕ್ರವರ್ತಿ. ದಾನವ—ರಾಕ್ಷಸ. ವೃತ್ತಿ—ನಡತೆ.

೩೮. ಪ್ರಸರಿಸು—ಪಸರಿಸು (ದ್ಭ)—ಹರಡು, ಉಂಟಾಗು. ಅಸು—ಪ್ರಾಣ. ನಖ—ಉಗುರು. ನಳನನ್ನೇ ನಾನು ಗಂಡನೆಂದು ನಂಬಿದ್ದೇನೆ; ಅವನ ಕರುಣೆ ನನ್ನ ಮೇಲೆ ಉಂಟಾದರೆ ಲೇಸು. ಇಲ್ಲವಾದರೆ ನನಗೆ ಮರಣವೇ ಶರಣು. ಇದೇ ನನ್ನ ಸಂಕಲ್ಪ.

೩೯. ದೃಢ—ನಂಬಿಕೆ. 'ಎನಲು ಕರ್ಣನ ದೃಢವ ಕಂಡನು' ಕು.ಭಾ. ಕುಡಿ+ತೋರು. ಲಜ್ಜಿಸು—ನಾಚಿಕೆಪಟ್ಟುಕೊಳ್ಳು. ನಳನೆಂಬ ಹೆಸರನ್ನು ಕೇಳಿ ದಮಯಂತಿ ಅಪ್ರತಿಭಳಾಗಿರಬೇಕು. ಅವನು ನಳನೆಂದು ತಿಳಿದುದರಿಂದಲೂ, ಅವನೊಡನೆ ಅಷ್ಟು ಮಾತನಾಡಿದುದರಿಂದಲೂ ಆಕೆಗೆ ನಾಚಿಕೆಯಾಯಿತು.

೪೦. ನಾಕನಿಳ(ಲ)ಯ—ಸ್ವರ್ಗದ ಮನೆ. ವಿದರು—ತಿಳಿದವರು. ಪ್ರಾಕೃತ—ಸಾಮಾನ್ಯ. ನಿದರ್ಶನ—ಗುರುತು.

೪೧. ಸಂಶಯವ ಉಳಿದು—ಬಿಟ್ಟು.

೪೨. ಪುಳಕ—ರೋಮಾಂಚ (ಮೈಕೂದಲು ಎದ್ದುನಿಲ್ಲುವುದು). ಪೊಂಪುಳಿ—ರೋಮಾಂಚ. ವಹಿಲ—ಬೇಗ.

೪೩. ಆವಳಿ—ಸಾಲು. ಗುಹ್ಯಕ—ಯಕ್ಷ.

೪೪. ನಿಸ್ಸಾಳ—ವಾದ್ಯ. ಉರುಬು—ಹೆಚ್ಚಾಗು. ಅರ್ಪು—ಸಮ...

ನಾಗು (ಆರ್ + ಪು).

೪೮. ಶೋಭಾನ—ಮಂಗಳಗೀತೆ. ತಿಗುರು—ಲೇಪಿಸು. ಮಜ್ಜನ—ಸ್ನಾನ.

೪೯. ಮೊಗೆ—ಎತ್ತಿಹಾಕು. ದುಕೂಲ—ರೇಷ್ಮೆಯ ಬಟ್ಟೆ.

೫೦. ಹಡಪ—ತಾಂಬೂಲದ ಚೀಲ, ಸಂಚಿ. ಊಳಿಗ—ಕೆಲಸದವರು. ದಮಯಂತಿ ರಾಜಸಭೆಗೆ ಬಂದುದು ಬಿಳಿಯ ಕಮಲಕ್ಕೆ ಲಕ್ಷ್ಮಿ ಬಂದಂತಾಯಿತು. ಸಿತ+ಅಬ್ಜ—ಬಿಳಿಯ ಕಮಲ. ಕಂಚುಕಿ—ಅಂತಃಪುರವನ್ನು ಕಾಯುವವನು. ಉಗ್ಗಡ—ಸಮೂಹ. ಮುಂಗುಡಿ—ಮುಂದಿನ, ಮುಂದೆ. ಗಡಣ—ಸಮೂಹ. ದ್ರೌಪದಿ ಸ್ವಯಂವರಕ್ಕೆ ಬಂದಾಗಲೂ ಇದೇ ಹೋಲಿಕೆಯನ್ನು ಕೊಟ್ಟಿದೆ.

ಮುಂದೆ ಪಾಯವಧಾರು ಸತಿಯರ
ಸಂದಣಿಯ ಸಾಲಿನಲಿ ದಂಡಿಗೆ
ಗಿಂದುಮುಖಿ ಬಂಡಳು ಸಿತಾಬ್ಜಕೆ ಲಕ್ಷ್ಮಿಯಂದದಲಿ

ಕು.ಭಾ. ಆದಿಪರ್ವ (೧೩–೨೮.)

೫೧. ಕುಡಿತೆಕಣ್ಣು—ಬೊಗಸೆಗಣ್ಣು. ನಿರಿ—ನೆರಿಗೆ. ತೊಡರು—ಆಭರಣ. ಕಿರುಬೆಮರಿಡು—ಸ್ವಲ್ಪವಾಗಿ ಬೆವರು.

೫೨. ಕುಮಾರಿ (ಸಂ)—ಕುವರಿ, ಮಗಳು. ನಿವಹ—ಸಮೂಹ.

೫೩. ಕೈಕಂಬಿ—ಕೈಯಲ್ಲಿ ಅಧಿಕಾರದ ಕೋಲನ್ನು ಹಿಡಿದವನು.

೫೫. ದಮಯಂತಿ ರಾಜಸಭೆಯಲ್ಲಿ ನಳನನ್ನು ವರಿಸಲು ಬಂದಾಗ ರಾಜಕುಮಾರರು ಅವಳ ಸೌಂದರ್ಯಕ್ಕೆ ಬೆರಗಾಗಿ ಬಾಯಲ್ಲಿ ನೀರು ಕರೆದರು. ಮನಸ್ಸಿನಲ್ಲಿ ಉಂಟಾದ ಭಾವಗಳನ್ನು ಮುಖದಲ್ಲಿಯೂ, ಸವಿನುಡಿಗಳಲ್ಲಿಯೂ ತೋರಿದರು. ನಿಜಾಯತ—ನಿಜವಾದ ವಿವರ. ಮುರಿದು—ತಿರುಗಿ.

೫೬. ಉಪೇಕ್ಷಿಸು—ತಿರಸ್ಕರಿಸು. ಮಂಡಲಾಧಿಪ—ರಾಜ. ಮಂಡಲ—ದೇಶ. ಅಂಡಲೆ—ಬಾರಿಬಾರಿಗೂ ಪೀಡಿಸು. ಆಖಂಡಲ—ಇಂದ್ರ. ಬೆಸಸು, ಳ್—ಕೇಳು. ಭಾರತಿ—ಸರಸ್ವತಿ.

೫೭. ನೀರಜ—ಕಮಲ. ಪಾಣಿ—ಕೈ. ಪನ್ನಗ+ವೇಣಿ—ಹಾವಿನಂತೆ [illegible]ಯುಳ್ಳವಳು. ಶ್ರೇಣಿ—ಸಮೂಹ. ನಿಕುರುಂಬ—ಸಮೂಹ. ರತ್ನ—([illegible]ದ್ಭ). ಕ್ಷೋಣಿ—ಭೂಮಿ.

೫೮. ವನಜನಾಭ—ವಿಷ್ಣು.

೫೯. ಮುಗ್ಧ—ಮುಗುದ, ಏನೂ ತಿಳಿಯದವ. ಬಿಂಗಡಿಸು—ಚಂಚಲ ವಾಗು (?) ನಿಗಮನುತೆ—ವೇದಗಳಿಂದ ಹೊಗಳಿಸಿಕೊಂಡವಳು. ಗೀರ್ವಾಣಿ—ದೇವತೆ.

೬೦. ಸಂಭಾವನೀಯರು—ಗೌರವಾರ್ಹರು. ಎರಗು—ನಮಸ್ಕರಿಸು. ಸಂಭವ—ಹುಟ್ಟಿದವ. ತರಳೆ—ಸ್ತ್ರೀ. ಪತಿಕರಿಸು—ತನ್ನವಳೆಂದು ತಿಳಿ.

೬೧. ದೇವತೆಗಳಿಗೆ ದಮಯಂತಿಯ ಮೇಲೆ ಮನಸ್ಸಿದ್ದರೂ, ಅವಳ ಸ್ತೋತ್ರಕ್ಕೆ ಮೆಚ್ಚಿ ತಮ್ಮ ಆಸೆಯನ್ನು ಬಿಟ್ಟುಬಿಟ್ಟರು. ನಿಜವಾಗಿಯೂ ಇದು ಅವರ ದೊಡ್ಡತನವನ್ನು ತೋರಿಸುತ್ತದೆ. ಗಳಿಲನೆ—ತಕ್ಷಣವೇ. ಪ್ರಚ್ಛನ್ನ—ಮರೆ. ಮೊಳಗು—ಶಬ್ದಮಾಡು.

೬೨. ಶೇಷಾ (ಸಂ)—ಸೇಸೆ, ಅಕ್ಷತೆ. ತಳೆ—ಎರಚು.

೬೩. ತುಂಗ(ಎತ್ತರ)ವಿಕ್ರಮನಾಗು—ತುಂಬಿದ ಪರಾಕ್ರಮವುಳ್ಳವ ನಾಗು. ಅಭಿಮನ್ಯುವಿನ ಮದುವೆಯ ಕಾಲದಲ್ಲೂ ಇದೇ ರೀತಿ ಹರಸುತ್ತಾರೆ.

ಅಭನಸನ್ನಿಭವೀರನಾಗೆಂ। ದಿಭಗಮನೆಯರು ಕೃಷ್ಣನರಸಿಯ।
ರಭಿಜನಾಮಲತಿಲಕನನು ಹರಸಿದರು ಹರುಷದಲಿ ॥

ಕು. ಭಾ. ವಿರಾಟಪರ್ವ (೧೧-೭೮.)

ಬಿಂಗಡ—ಪ್ರತ್ಯೇಕ. ದೇವೇಂದ್ರನು ನಳದಮಯಂತಿಯರಿಗೆ ತನ್ನ ಮೆಚ್ಚಿಗೆ ಯನ್ನು ಸೂಚಿಸಲು ಪ್ರತ್ಯೇಕವಾಗಿ ಬಹುಮಾನ ಕೊಟ್ಟನು. ಅಂಗವಸ್ತ್ರ— ಬಹುಮಾನದ ಬಟ್ಟೆ. ಹಿಂಗಿದಮರೇಂದ್ರನು, ಹಿಂಗದಮರೇಂದ್ರನು, ಪಾ.

೬೬. ಮೊರೆ—ಶಬ್ದಮಾಡು. ಮೋಹರಿಸು—ಒಟ್ಟಾಗು.

೬೭. ನೃಪವೃಂದ, ಪಾ, ಸಚಿವರೊಗ್ಗಿನಲಿ, ಪಾ. ವರಪುರದರಸ ಚೆನ್ನಿಗರಾಯ ಕರುಣದಲಿ, ಪಾ.

## ೪. ಅರಸ ಸೋತನು ವಿಧಿಯ ಘಟನೆಯಲಿ

ನಳನಿಗೆ ಮದುವೆಯಾದ ಮೇಲೆ ಅವನ ಏಳಿಗೆ ಮೊದಲಾಯಿತು. ಐಶ್ವರ್ಯ, ರಾಜ್ಯ, ಕೀರ್ತಿ ಇವೆಲ್ಲ ವಿಸ್ತರಿಸಿದುವು. ಇವೆಲ್ಲಕ್ಕೂ ಕಲಶ ವಿಟ್ಟಂತೆ ಅವನಿಗೆ ಮಕ್ಕಳಾದರು.

೧. ನೈಷಧ—ನಿಷಧದೇಶದ ದೊರೆ, ನಳ. ಅತುಳ—ಹೆ[illegible] ಮೌಳಿ—ತಲೆ. ಅಂಘ್ರಿ—ಪಾದ. ಭಡಾಳಿಸು—ಪ್ರಜ್ವಲಿಸು, ಹೆ[illegible] ತ್ರೈಜಗ—ಮೂರು ಲೋಕ; ಸ್ವರ್ಗ, ಮರ್ತ್ಯ, ಪಾತಾಳ.

೨. ಚಕ್ರೇಶ—ಚಕ್ರವರ್ತಿ. ವರಪುತ್ರಿ—ಪಾ. ಅಂತರ—ಮಧ್ಯ.

೩. ಕುಟಿಲಾತ್ಮಕ—ವಕ್ರವಾದ ಮನಸ್ಸುಳ್ಳವನು. ನಿಸ್ಸಾರ ಹೃದಯ ಕ್ರೂರಿ.

೪. ಇಲ್ಲಿ ಕಲಿಪುರುಷನ ರೂಪದ ವರ್ಣನೆ ಇದೆ. ಮಲಿನ—ಕೊಳೆ. ಕೆಂಚು—ಕೆಂಪು. ವಸನ—ಬಟ್ಟೆ. ಕರಾಳ—ಕ್ರೂರ. ಕಲಿಪುರುಷನ ಮನಸ್ಸಿನಂತೆ ರೂಪು.

೫. ಮುಂದೆ ಕಲಿಪುರುಷನಾಡುವ ಮಾತು ಅವನ ವಕ್ರಸ್ವಭಾವಕ್ಕೆ ಕನ್ನಡಿಯಂತಿದೆ. ತೋರಹತ್ತ (ಹಸ್ತ. ಸಂ)—ದೊಡ್ಡ ಕೈ. ದೊಡ್ಡ ಕೈಯಿಂದ ಸನ್ನೆಮಾಡಿ ಹೇಳಿದನು ಎಂದು ಭಾವ. ಖತಿ—ಕೋಪ.

೬. ಕೈಕೊಳ್—ಸ್ವೀಕರಿಸು.

೭. ಕಮಲಾಸನಂಗೆ ಅಳವಲ್ಲ ನಿನ್ನಲ್ಲಿ ಹರಿವುದು ಏನು ? ಬ್ರಹ್ಮನಿಗೇ ಸಾಧ್ಯವಾಗದ ಕೆಲಸ ನಿನ್ನಿಂದ ಏನಾಗುತ್ತದೆ ?

೮. ತಮ—ಕತ್ತಲೆ. ಕುಹಕ—ಮೋಸ.

೯. ಆಕ್ರಮಿಸಿಕೊಳ್ಳು—ವಶಪಡಿಸಿಕೊಳ್ಳು. ಪುರುಷರಲಿ ಅಧಮ—ಗಂಡಸರಲ್ಲಿ ನೀಚ. ವಟು—ಬ್ರಹ್ಮಚಾರಿ. ಉದ್ಭ್ರಮಿಸು—ಮಿತಿಮೀರಿ ಹರಟು (?)

೧೦. ಭಾ(ಫಾ)ಲದಲ್ಲಿ ಲೋಚನವುಳ್ಳವನು—ಹಣೆಯಲ್ಲಿ ಕಣ್ಣುಳ್ಳವನು, ಈಶ್ವರ. ಬೀಳುಮಾತು—ವ್ಯರ್ಥವಾದ ಮಾತು. ನೀಲಮೇಘಶ್ಯಾಮ—ಕಪ್ಪಾದ ಮೇಘದಂತೆ ಕಾಂತಿಯುಳ್ಳವನು, ಕೃಷ್ಣ. ಸಮಪಾಳಿ—ಸಮಾನ. ನಳನು ನಿನಗೆ ಏನೂ ಕೇಡನ್ನು ಬಯಸಿಲ್ಲ. ಅಲ್ಲದೆ ಗುಣದಲ್ಲಿ ವಿಷ್ಣುವಿಗೆ ಸಮಾನ. ಅಂಥವನಿಗೆ ನೀನು ಕೇಡನ್ನು ಬಯಸಬೇಡ.

೧೧. ಕಲಿಯ ಛಲವನ್ನು ನೋಡಿ. ನಾನು ಕೆಲಸವನ್ನೇ ಕೈಗೆ ತೆಗೆದುಕೊಳ್ಳುವುದಿಲ್ಲ. ತೆಗೆದುಕೊಂಡ ಕೆಲಸವನ್ನು ಕೊನೆಮುಟ್ಟಿಸದೆ ಬಿಡುವುದಿಲ್ಲ. ಮತ—ಅಭಿಪ್ರಾಯ. ಮಾಣೆ—ಸುಮ್ಮನಿರುವುದಿಲ್ಲ. ಮಿಡುಕು—ಸಂಕಟಪಡು. ವಹಿಲ—ಬೇಗ.

೧೨. ಅವನೀತಳ—ಭೂಮಿ. ಪೊರ್ದು>ಹೊದ್ದು—ಸೇರು. ಬಳಸು—ಸುತ್ತುಗಟ್ಟು.

೧೩. ನಳನ ದೇಶದಲ್ಲಿದ್ದ ಜನಗಳ ಒಳ್ಳೆಯ ಸ್ವಭಾವವನ್ನು ಈ ಪದ್ಯ ಹೇಳಿದೆ. ಪಂಥ—ಹಟ, ಶಪಥ. ಅನೃತ—ಸುಳ್ಳು. ಅಗ್ಗ—ಅರ್ಘ(ಸಂ), ಶ್ರೇಷ್ಠ. ಕ್ರೋಧ—ಕೋಪ.

೧೪. ಹೊರಗೆ—ಸಮೀಪ. ಉರುತರ—ಶ್ರೇಷ್ಠ. ಕಲಿಪುರುಷ

ರಾಜಧಾನಿಯ ಉದ್ಯಾನದ ಬೀದಿಯಲ್ಲಿದ್ದ ಕರ್ಣಪತ್ರದ ಮರದ ತುದಿ (ಅಗ್ರ)ಯ ಮೇಲೆ ಬಹುದಿನವಿದ್ದು ಕಾರ್ಯಸಾಧನೆಗಾಗಿ ಸಮಯ ಕಾಯು ತ್ತಿದ್ದನು. ಏಕೆಂದರೆ ಆಚಾರವಂತನಾದ ನಳನನ್ನು ಕೆಡಿಸುವುದು ಅವನಿಗೆ ಸುಲಭವಾದ ಕೆಲಸವಾಗಿರಲಿಲ್ಲ.

೧೬. ದುರ್ + ದಿವಸ—ಕೆಟ್ಟ ದಿವಸ. ಮೇಘದಿಂದ ಮುಚ್ಚಿಹೋದ ದಿನಕ್ಕೂ ದುರ್ದಿನವೆಂದು ಹೆಸರು. ನಳನ ಪತನಕ್ಕೆ ಮೊದಲಾದ ದಿನ ಇದು. ಹವಣು—ವಿಧಿಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ.

೧೭. ಉಪಮೆ—ಉಪಾಯ (?). ನೆಗಳ್ದು—ಯೋಚಿಸಿ. ಸಖ— ಸ್ನೇಹಿತ. ರಾಜ್ಯಪದ—ರಾಜ್ಯದ ಪದವಿ.

೧೮. ಬಲ್ಲಿದ—ಶೂರ. ದ್ಯೂತ—ಜೂಜು. ನೆತ್ತ—ಪಗಡೆಯಾಟ. ವಲ್ಲಭ—ಒಡೆಯ.

೧೯. ಕಲಿಯ ಮಾತಿನಲ್ಲಿ ಪುಷ್ಕರನಿಗೆ ನಂಬಿಕೆ ಬಂತು. ಇಂಬು ಗೊಳ್—ಅವಕಾಶ ಕೊಡು. ಪುಷ್ಕರ ನಳನ ತಮ್ಮ. ಅಂಬುಜ + ಅಕ್ಷ— ಕಮಲದಂತೆ ಕಣ್ಣುಳ್ಳವನು, ವಿಷ್ಣು. ಕಳೆ—ಕಾಂತಿ.

೨೦. ಕೈವಾರಿಸು—ಹೊಗಳು. ಸಿತಚಾಮರ—ಬಿಳಿಯ ಚಾಮರ.

೨೧. ಹಾಸಂಗಿ—ಪಗಡೆಹಾಸು. ಉಳಿ—ಬಿಡು. ಸೋತವನು ಹೆಂಡತಿ ಯೊಡನೆ ಕಾಡಿಗೆ ಹೋಗುವುದೇ ಈ ಜೂಜಿನ ಪಣ.

೨೨. ಕೊರತೆ + ತೋರು—ಕುಂದು ಕಾಣಿಸು. ಪಾರ್ಥಿವ—ರಾಜ. ಧುರ —ಯುದ್ಧ. ಎಡೆ—ಅವಕಾಶ, ನಡುವೆ. ಓಸರಿಸು—ಹಿಂದೆಗೆ, ನಿರುತ—ಸತ್ಯ. ಯುದ್ಧ, ಬೇಟೆ, ಜೂಜು—ಇವುಗಳಿಗೆ ಇನ್ನೊಬ್ಬನು ಕರೆದರೆ ರಾಜನು ಹಿಂದೆಗೆಯಬಾರದು. ಭಾರತದಲ್ಲಿಯೂ ಶಕುನಿ ಧರ್ಮರಾಜನಿಗೆ ಇದೇ ಮಾತನ್ನು ಹೇಳುತ್ತಾನೆ.

ಅರಸ ಕೇಳ್ ಕಾಳಗಕೆ ಜೂಜಿಗೆ। ಕರೆದಡೋಸರಿಸಿದರೆ ಬಳಿಕವ।
ಗರುವನೇ ಕ್ಷತ್ರಿಯರೊಳಗೆ, (ಸಭಾಪರ್ವ—೧೪-೪೦).

೨೩. ನಳಪುಷ್ಕರರು ಜೂಜಾಡಿದ ಸನ್ನಿವೇಶ, ಕುರುಪಾಂಡವರು ಜೂಜಾಡಿದ ಸನ್ನಿವೇಶವನ್ನು ನೆನಪಿಗೆ ತರುತ್ತದೆ. ಕೈಕೊಂಡು + ಆಡು— ಸ್ವೀಕರಿಸಿ, ಒಪ್ಪಿ ಆಡು. ಉಪಾಧಿ—ಕೆಲಸ.

೨೪. ಮೇಳವಿಸು—ಒಟ್ಟಾಗು. ದೇವಗತಿ—ವಿಧಿಯ ಘಟನೆ. [illegible]ಭಾತುಗಳನ್ನು ಕವಿ ಮತ್ತೆ ಮತ್ತೆ ನುಡಿಯುತ್ತಾನೆ. ಮನುಷ್ಯ [illegible]ಯತ್ನ ಮಾಡಿದರೂ ವಿಧಿಯ ಮುಂದೆ ಅವನಾಟ ಸಾಗದು ಎಂ[illegible]

ಇಲ್ಲಿಯ ಭಾವ. "ಷಡ್ಭಿಃ ಮನುಷ್ಯಚಿಂತಾನಾಂ ಸಪ್ತಮಮ್ ದೈವಚಿಂತನಂ" ಎಂಬುದನ್ನು ನೆನೆಯಿರಿ. "ಆಡಿದನು ಜೂಜಿನಲಿ ನೃಪ ಹೋಗಾಡಿದನು" ಎಂಬುದು ಕುಮಾರವ್ಯಾಸನ ಮಾತು. "ಆಡಿದನು ನೃಪನಾಕ್ಷಣಕೆ ಹೋಗಾಡಿದನು" (ಸಭಾಪರ್ವ, ೧೪-೬೫.)

೨೫. ಅಳಿದು—ಹೋಗಿ. ಐತಂದು—ಬಂದು. ರಾಜ (ಚಂದ್ರ)ವದನೆ (ಮುಖಿ). ಶರಧಿರಾಜ—ಸಮುದ್ರರಾಜ, ವರುಣ. ಅವನ ಮಗಳು ಲಕ್ಷ್ಮಿ. ದಮಯಂತಿ ನಳನು ಜೂಜಾಡಿದುದನ್ನೇ ಅರಿಯಳು.

೨೬-೨೭. ಬೀಯ—ವ್ಯಯ (ಸಂ), ಹಾಳಾಗು. ಇನ್ನಿದರಾಯತವ ನೀವ್ ಬಲ್ಲಿರಿ—ಈ ವಿಷಯದಲ್ಲಿ ಮುಂದೇನು ಮಾಡಬೇಕೆಂಬುದು ನಿಮಗೇ ಗೊತ್ತು. ಈ ಮಾತನ್ನು ಕೇಳಿ ಅರಳಿದ ಕಮಲಕ್ಕೆ ಮಂಜು ಸುರಿದಂತೆ ದಮಯಂತಿಯ ಮುಖ ಬಾಡಿತು. ಬಗೆ—ರೀತಿ, ಸಮೆ—ತೀರು. ಏಗು—ಏನು ಮಾಡುವುದು ? ಕು+ಮತಿ—ಕೆಟ್ಟ ಬುದ್ಧಿ. ಪುರೋಹಿತ ಬಂದು ದಮಯಂತಿಗೆ ಜೂಜಿನ ವಿಷಯವನ್ನು ತಿಳಿಸುವಂತೆ, ಭಾರತದಲ್ಲಿ ಪ್ರಾತಿಕಾಮಿಕ ಬಂದು ಈ ವಿಷಯವನ್ನು ದ್ರೌಪದಿಗೆ ತಿಳಿಸುತ್ತಾನೆ.

ತಾಯೆ ಬಿನ್ನಹವಿಂದು ನಿಮ್ಮಯ । ರಾಯ ಸೋತನು ಜೂಜಿನಲಿ ಕುರು ।
ರಾಯ ಗೆಲಿದನು ಕೋಶವನು ಕರಿತುರಗರಥಸಹಿತ ॥
ನೋಯಲಾಗದು ಹಲವು ಮಾತೇ । ನಾ ಯುಧಿಷ್ಠಿರನೃಪತಿ ಸೋತನು ।
ತಾಯೆ ಭೀಮಾರ್ಜುನನಕುಲಸಹದೇವ ನೀವ್ ಸಹಿತ ॥
ಅರಳಿದಂಬುಜವನಕೆ ಮಂಜಿನ । ಸರಿಯು ಸುರಿವಂದದಲಿ ಸುಗ್ಗಿಯ ।
ಸಿರಿಯ ಹೊಸ ಬೆಳುದಿಂಗಳನು ಬಲುಮುಗಿಲು ಕವಿವಂತೆ ॥
ಚರನ ಬಿನ್ನಹಕರಸಿ ಮೊದಲಾ । ಗಿರೆ ಸಮಸ್ತ ಸಖೀಜನದ ಮುಖ ।
ಸರಸಿರುಹ ಬಾಡಿದುದು ಮುಸುಕಿತು ಮೌನಮಯಜಲದ ॥

ಸಭಾಪರ್ವ (೧೪-೫೧-೫೨.)

೨೮. ವಿಮಲಮತಿ—ನಿರ್ಮಲವಾದ ಮನಸ್ಸು. ರಾಜ್ಯಭ್ರಮಣ—[illegible] ಕೈಬಿಡುವಿಕೆ. ತಮ—ಜಡ, ತಾಮಸ. ದ್ಯುಮಣಿ—ಸೂರ್ಯ.

[illegible]. ಶಶಿಕುಲವೆಂಬ ಅಂಬುಧಿ (ಸಮುದ್ರ)ಕ್ಕೆ ಚಂದ್ರನಂತಿರುವವನು. [illegible]—(ಶತ್ರು) ನೃಪರಿಗೆ. ನಿಶಿತ—ಹರಿತ, ತೀಕ್ಷ್ಣ. ಭಾಸ್ಕರ—ಸೂರ್ಯ. [illegible]—ಚಿಂತೆ, ಬಿಸುರುಹ—ಕಮಲ. ಇದು ಶ್ರೀಕೃಷ್ಣನ ಕರುಣ[illegible] [illegible]ನೆ. ವಿಧಿಯ ಮಾಟ. ನಮಗೆ ರಕ್ಷಣೆ ಶ್ರೀಕೃಷ್ಣನ ಕರುಣವೇ[illegible]

ಕವಚ. ಅದು ತಪ್ಪಿದರೆ ಮನುಷ್ಯನ ಆಟ ಸಾಗದು ಎಂಬುದನ್ನು ಇದರೊಡನೆ ಹೋಲಿಸಿ.

ದ್ಯೂತ ಒಂದು ವ್ಯಸನ. ಅದನ್ನು ಆಡುತ್ತ ಆಡುತ್ತ ಮನುಷ್ಯನಿಗೆ ಎಚ್ಚರವೇ ತಪ್ಪುತ್ತದೆ. ನಳನಂಥವನಿಗೆ ದ್ಯೂತದಲ್ಲಿ ಆಸೆ ಉಂಟಾದದ್ದನ್ನು ನೋಡಿ ದಮಯಂತಿಗೇ ಆಶ್ಚರ್ಯ. ಇದರಂತೆಯೇ ಇನ್ನೂ ಕೆಲವು ವ್ಯಸನ ಗಳಿವೆ. ಅವುಗಳ ವಿಷಯದಲ್ಲಿ ಎಚ್ಚರಿಕೆಯಿಂದಿರಬೇಕೆಂದು ಧರ್ಮರಾಯ ನನ್ನು ಹಸ್ತಿನಾವತಿಗೆ ಕರೆಯಬಂದ ವಿದುರ ಹೇಳುತ್ತಾನೆ

ದ್ಯೂತ ಮೃಗಯಾವ್ಯಸನ ಪಾರು । ಷ್ಯಾತಿಶಯ ಮಧುಪಾನ ಕಾಂತಾ ।
ಪ್ರೀತಿ ದಂಡವಿಘಾತಿ ದೂಷಣವರ್ಥ ಸಂಗತಿಯು ॥
ಜಾತ ಸಪ್ತವ್ಯಸನವಿವು ಸಂ । ಪ್ರೀತಿಕರ ಮೊದಲಲಿ ವಿಪಾಕದೊ ।
ಳಾತು ಕೆಡಿಸುವ ಹದನದರಿದಿಹುದು ॥

ಸಭಾಪರ್ವ, (೧೩-೬೧)

೩೦. ಅಪಜಯದ ನಾರಿಯ ಸೆರಗ ಹಿಡಿದೆನು. ಇದು ಕುಮಾರ ವ್ಯಾಸನ ಮಾತು. ನಾನು ಎಲ್ಲವನ್ನೂ ಜೂಜಿನಲ್ಲಿ ಸೋತೆ ಎಂದರ್ಥ. ಉಳುಹಿದೆನು ದೇಹವನು—ಎಲ್ಲವನ್ನೂ ಸೋತು ನಾನು ನಾಚಿಕೆಯಿಲ್ಲದೆ ದೇಹವನ್ನು ಇಟ್ಟುಕೊಂಡಿದ್ದೇನೆ. ಗಿರಿ—ಬೆಟ್ಟ. ಗಹ್ವರ—ಗುಹೆ. ತೊಳಲು —ಸಂಕಟದಿಂದ ತಿರುಗಾಡು. ಕೋಮಲೆಯಾದ ನೀನು ಬೆಟ್ಟಗುಡ್ಡ, ಕಾಡುಮೇಡುಗಳಲ್ಲಿ ಅಲೆಯಲಾರೆ.

೩೧. ದಮಯಂತಿ ನಳನಿಗೆ ಕೊಟ್ಟ ಉತ್ತರ ಆ ಮಹಾಸತಿಗೆ ತಕ್ಕುದಾಗಿದೆ. ಮನೆಯ, ವಾರ್ತೆ—ವಿಷಯ. ಲೋಕದಲ್ಲಿ ಯಾವುದೂ ಸ್ಥಿರವಲ್ಲ. ಸತ್ಯ ಮಾತ್ರ ಸ್ಥಿರ.

೩೨. ಸಂತವಿಡು—ಸಮಾಧಾನಪಡಿಸು. ಸರಿ—ಹೋಗು. ಅನುವಾಗು —ಸಿದ್ಧವಾಗು. ಪುಷ್ಕರನ ಕೈ ಮೇಲಾದಾಗ ನಳನಿಗೆ ಅವನಾಡಿದ ಮಾತನ್ನೂ, ಅವನು ಸೋತಾಗ ನಳನಾಡಿದ ಮಾತನ್ನೂ ಹೋಲಿಸುವು ರಿಂದ ಅವರಿಬ್ಬರ ಗುಣ ಚೆನ್ನಾಗಿ ತಿಳಿಯುತ್ತದೆ.

೩೩. ತಳಿತ—ಚಿಗುರಿಟ್ಟ, ಹೊಸದಾದ. ಗಾವಳಿ—ಅಬ್ಬರ. ಮಸ ತುಂಬು.

೩೪. ರೋದನ—ಅಳು. ಭಾವಶುದ್ಧಿ—ನಿರ್ಮಲವಾದ ಮ -ಡ ಮಾಡಿದ ಕಾರ್ಯದ ವಿಷಯದಲ್ಲಾಗಲೀ, ಮುಂದೆ ಬರುವ ಕಷ್ಟ

ಅನುಭವಿಸಬಹುದಾದ ವಿಷಯದಲ್ಲಾಗಲೀ ಯೋಚಿಸದ ಮನಸ್ಸು.

೩೫. ಲೋಕದ ಮಾನಿನಿಯೇ—ಲೋಕದಲ್ಲಿರುವ ಸಾಮಾನ್ಯ ಹೆಂಗಸಿನಂತಹವಳೇ ? ಮನಸಂದು—ಮನಸ್ಸಿಟ್ಟು.

## ೫. ದಮಯಂತಿ ಹೊಕ್ಕಳು ಚೈದ್ಯನಗರಿಯನು

೧ ಪ್ರಯಾಣ (ಸಂ)—ಪಯಣ. ಗತಿ—ಗಮನ, ಹೋಗುವಿಕೆ. ತಾಳಿಗೆ—ನಾಲಗೆ. ದಮಯಂತಿಗೆ ಈ ತೆರನಾದ ಅನುಭವ ಹೊಸದಾದ ಕಾರಣ ಕೋಮಲವಾದ ಅವಳ ಕಾಲೊಡೆದು ರಕ್ತ ಸುರಿದುದು ಸಹಜವೇ ಆಗಿದೆ. ಬಸಿವರುಣಜಲ. ಪಾ, ಅರುಣಜಲ—ಕೆಂಪಾದ ನೀರು, ಕೆನ್ನೀರು, ರಕ್ತ. ವರ್ತ್ಮ (ಸಂ)—ಬಟ್ಟೆ, ದಾರಿ. ಕಾಲೊಡೆದು ರಕ್ತ ಸೋರುವುದರಿಂದ ದಾರಿ ಕೆಸರಾಗುವುದಿಲ್ಲ. ಹಾಗೆ ಆಯಿತೆಂದು ಹೇಳಿರುವುದರಿಂದ ಇದು ಅತಿಶಯೋಕ್ತಿ ಎಂಬ ಅಲಂಕಾರ. ಹೇಳಲೇನಾವವರ, ಪಾ.

೨. ಅನಲ—ಬೆಂಕಿ. ಹೊಯ್ಲು—ಹೊಡೆತ. ಎಳೆಯ ಬಾಳೆಯ ಸುಳಿ ಬೆಂಕಿಯ ಸಮೀಪಕ್ಕೆ ಬಂದರೆ ಬಾಡುತ್ತದೆ. ಹಾಗೆಯೇ ಈ ಕಷ್ಟಗಳಿಂದ ಕೋಮಲೆಯಾದ ದಮಯಂತಿ ಬಾಡಿದಳು ಎಂದು ಭಾವ. ಮೆಲ್ಪಾಸು—ಮೃದುವಾದ ಹಾಸಿಗೆ. ಎಳೆಯ ಬಾಳೆಯ ಸುಳಿಯನನಲ ಜ್ವಲನ ಹೊಯ್ಲಲಿ ತಾರಿಸಿದವೊಲು, ಪಾ, ಹೊಳೆವ ಹಂಸೆಯ ಹಾಸಿನಲಿ, ಪಾ.

೩. ಕಷ್ಟಕಾಲದಲ್ಲಿ ದಮಯಂತಿ ಗಂಡನಿಗೆ ಧೈರ್ಯ ಹೇಳುತ್ತಾಳೆ. ಇದು ಸಹಧರ್ಮಿಣಿಯ ಲಕ್ಷಣ. ವಿರಿಂಚ—ಬ್ರಹ್ಮ. ನಮಗೆ ಐಶ್ವರ್ಯ ಹೋದುದಕ್ಕೆ ವ್ಯಥೆಪಡಬೇಕಾಗಿಲ್ಲ. ಐಶ್ವರ್ಯ ಶಾಶ್ವತವಲ್ಲ.

೪. ಮಿಡುಕು—ಸಂಕಟಪಡು. ಉರವಣಿಸು—ಉತ್ಸಾಹಪಡು. ಹಚ್ಚಡ—ಬಟ್ಟೆ. ನಭಸ್ಥಳ—ಆಕಾಶಮಾರ್ಗ.

ಮೂಗಿನಲಿ....ತೂಗಿದನು—ಕುಮಾರವ್ಯಾಸನಲ್ಲಿ ಈ ವಾಕ್ಯ ಸಾಮಾನ್ಯ. ಮಕುಟ—ಕಿರೀಟ. ಅಪಹರಿಸು—ಕದ್ದೊಯ್ಯು.

೬. ನಿರ್ವಾಣ—ಬೆತ್ತಲೆ. ಚೀರಾ (ಸಂ)—ಸೀರೆ, ಬಟ್ಟೆ. ನಳನ ಸ್ಥಿತಿಯನ್ನು ಕಂಡು ದಮಯಂತಿಗೆ ನಾಚಿಕೆಯಾಯಿತು. ಹೆಂಡತಿಯ ಸೀರೆಯನ್ನು ಉಡುವಂತಾದುದಕ್ಕೆ ನಳನಿಗೆ ನಾಚಿಕೆಯಾಯಿತು. ನಸು—ಸ್ವಲ್ಪ. ಬಾಹಿರ—ಹೊರಗಾದವನು. ನಳನ ದರ್ಶನಕ್ಕಾಗಿ ರಾಜರು ಅವನ ಮನೆಯ ಬಾಗಿಲನ್ನು ಕಾಯುತ್ತಿದ್ದರು. ಅಂಥವನಿಗೆ ಈಗ ಎಂಥ ಗತಿ ಬಂತು ! [illegible] ಭಾವ ಭಾರತದಲ್ಲಿದೆ.

ಧರೆಯ ನೃಪರಿಗೆ ಹಸ್ತಿನಾಪುರ। ದರಮನೆಯ ಬಾಗಿಲಲಿ ಸಮಯವು।
ದೊರಕಲಂತದು ಪುಣ್ಯವೆಂಬೀಸಾರ್ವಭೌಮತೆಯ॥

(ಉದ್ಯೋಗಪರ್ವ)

೧೦. ಗಂಡನನ್ನು ಬಿಟ್ಟರೆ ಹೆಂಡತಿಗೆ ಬೇರೆ ಆಶ್ರಯವಿಲ್ಲವೆಂಬುದೇ ಇಲ್ಲಿಯ ಭಾವ. ಹಳುವ—ಕಾಡು. ನೀನಿದ್ದ ಕಾಡೇ ರಾಜ್ಯ. ಹಾಗಿಲ್ಲದ ಮನೆಯೇ ಅಡವಿ. ನಿಮ್ಮನ್ನು ಕಷ್ಟಪಡಿಸಿದೆ ಎಂದ ಧರ್ಮರಾಜನಿಗೆ ಅವನ ತಮ್ಮಂದಿರು ಹೇಳುವ ಉತ್ತರ—

ಒಡಲ ಬಳಿ ನೆಳಲಿಂಗೆ ಗತಿ ಬೇ। ರ್ಪಡಿಸಿಹುದೆ ಸುಖದುಃಖವಿವು ನಿ।
ಮ್ಮಡಿಗಳಲಿ ತನು ನಾಲ್ಕರಲಿ ಜೀವಾತ್ಮ ನೀವೆಮಗೆ॥
ಅಡವಿಯೇ ಸಾಮ್ರಾಜ್ಯ ನಿಮ್ಮಡಿ। ಯೊಡನಿರಲು ನೀವಿಲ್ಲದಾಪುರ।
ವಡವಿ ನಮಗಹುದೆಂದು ಬಿನ್ನೈಸಿದರು ಭೂಪತಿಗೆ॥

(ವಿರಾಟಪರ್ವ)

೧೨. ಅರವಿಂದನಾಭ—ವಿಷ್ಣು. ಅರವಿಂದಸಖ—ತಾವರೆಯ ಗೆಳೆಯ, ಸೂರ್ಯ. ಸೂರ್ಯ ಮುಳುಗಿದನೆಂದು ಭಾವ.

ಪರ್ಬು—ಹಬ್ಬು. ದಮಯಂತಿಗೆ ಶೋಕ ಉಂಟಾದಂತೆ, ಡಬ್ಬಿಯನ್ನು ಮುಚ್ಚಿದ ಹಾಗೆ ಕತ್ತಲೆ ಲೋಕವನ್ನು ಮುಸುಕಿತು. ಶೋಕವನ್ನು ಕಪ್ಪು ಬಣ್ಣ ಎಂದು ಹೇಳುವುದು ಕವಿಸಮಯ. ಭರಣಿ—ಡಬ್ಬಿ. ಭೀಕರ—ಭಯಂಕರ. ತೂಪಿರಿ—ರಕ್ಷೆಗಾಗಿ ಉಫ್ ಎಂದು ಊದು.

೧೫. ತನ್ನನ್ನು ಕಾಣದೆ ದಮಯಂತಿ ತಂದೆಯ ಮನೆಗೆ ಹೋಗು ವಳೆಂಬ ಧೈರ್ಯ ನಳನಿಗಿದ್ದರೂ, ಪ್ರೀತಿಯ ವಸ್ತುವನ್ನು ಬಿಟ್ಟು ಮುಂದಕ್ಕೆ ಹೋಗುವಾಗ ಅವನಿಗೆ ಸಂಕಟವಾಗದಿರಲಿಲ್ಲ.

೧೬. ಅಡಸು—ವ್ಯಾಪಿಸು. ಉಗ್ಗಡ—ಅತಿಶಯ.

೧೭. ಉಪಟಳ—ತೊಂದರೆ. ಮೊರೆ—ಬೇಡಿಕೆ. ಉರುತರ—ಹೆಚ್ಚಾದ. ನಳನು ನಿಷ್ಕರುಣೆಯಿಂದ ಪ್ರಿಯಳನ್ನು ತೊರೆದನು. ದಮಯಂತಿ ಕ್ರೂರ ಮೃಗಗಳ ತೊಂದರೆಯನ್ನು ಹೇಗೆ ಸಹಿಸುವಳೋ! ಅದನ್ನು ನೋಡುತ್ತ ಎಂಬಂತೆ ಸೂರ್ಯ ಹುಟ್ಟಿದನಂತೆ! ಉತ್ಪ್ರೇಕ್ಷೆ.

೨೦. ಈ ಗೋಳಾಟ ಭಾರತದಲ್ಲಿ ಬರುವ ದ್ರೌಪದಿಯ ಗೋಳ [illegible] ಛಾಯೆ. ಪಾವಕ—ಬೆಂಕಿ. ಕಾಳಕೂಟ—ಒಂದು ಕ್ರೂರವಿಷ. ಹಾ [illegible] [illegible]ು. ಗರಳ—ವಿಷ.

ಆವ ಗರಳವ ಕುಡಿವೆನೋ ಮೇ । ಣಾವ ಬೆಟ್ಟವನಡರಿ ಬೀಳ್ವೆನೋ ।
ಆವ ಮಡುವನು ಹೊಗುವೆನೋ ಹಾಸರೆಯ ಗುಂಪಿನಲಿ ॥
ಆವ ಕುಂಡವ ಹಾಯ್ವೆನೋ ಮೇ । ಣಾವ ಪಾವಕನೊಳಗೆ ಹೊಗುವೆನೊ ।
ಸಾವು ಸಮನಿಸದೆನುತ ಮರುಗಿದಳು ನಳಿನಾಕ್ಷಿ ॥

ವಿರಾಟಪರ್ವ (೩-೬೧)

೨೧. ಈಡಾಡು—ಎರಚಾಡು.

೨೨. ಸುಮ್ಮಾನ—ಸಂತೋಷ. ಹಕ್ಕೆ—ಸಮೂಹ. ಉರಗ—ಹಾವು.

೨೫. ಶೈಲ—ಬೆಟ್ಟ. ಕೋಲು—ಬಾಣ. ಭುಜಗ—ಹಾವು. ಕರವಾಲ(ಳ)—ಕತ್ತಿ. ಅಹಿ—ಹಾವು.

೨೬. ಮೀಯ್—ಸ್ನಾನಮಾಡು. ಅಸು—ಪ್ರಾಣ (ಪೀಠಿಕೆಯಲ್ಲಿ ವಿಮರ್ಶೆಯ ಭಾಗವನ್ನು ನೋಡಿ).

೨೮. ಪುಳಿಂದ—ಬೇಡ. ನೀರಿನಿಂದ ತುಂಬಿದ ಕಣ್ಣಿನಿಂದ ಯಾವ ಪದಾರ್ಥವೂ ಕಾಣದೆ, ಬಯಲನ್ನೇ ನಳನೆಂದು ಅಪ್ಪುತ್ತಿದ್ದಳು ಎಂದು ಭಾವ. ಅಭಿಮನ್ಯು ಮಡಿದಾಗ ಸುಭದ್ರೆ ಹೀಗೆಯೇ ಮಾಡುತ್ತಿದ್ದಳಂತೆ. "ಕಂದ ಬಾ ಎಂದಪ್ಪುವಳು ಬಯಲ" ದ್ರೋಣಪರ್ವ. ಮರುಳು—ಪಿಶಾಚಿ. ನೆರೆದಿಹ—ಸೇರಿರುವ. ಬಳಗ—ಗುಂಪು.

೩೦. ಧಾತು+ಕುಂದಿದೆ—ಶಕ್ತಿಗುಂದಿಹೆನು.

೩೨. ಕನಸಿನ ರೀತಿ—ಕನಸಿನಲ್ಲಿ ಒಂದು ವಸ್ತು ಕ್ಷಣಕಾಲ ಕಂಡು ಮಾಯವಾಗುವಂತೆ. ಮೌನಿವ್ರಾತ—ಮುನಿಗಳ ಗುಂಪು. ವಿಸ್ಮಯ—ಸೋಜಿಗ. ಬೇಹಾರಿ—ವ್ಯಾಪಾರಿ, ವರ್ತಕ. ತೊಳಲು—ಸಂಕಟಪಡು. ನಿತಂಬಿನಿ—ಹೆಂಗಸು.

೩೩. ಮಾರ+ಅಂಗನೆ—ಮನ್ಮಥನ ಹೆಂಡತಿ, ರತಿ. ಬಣಜಿಗ—ವರ್ತಕ.

೩೪. ಬೀಡಿಕೆಯ—ಬಿಡಾರ ಮಾಡಿರುವ. ಉಪಹತಿ—ತೊಂದರೆ. ಗೂಢಿಸಿದ—ಹೆಸರಾದ.

೩೬. ಪದ+ಅಬ್ಜ—ಕಾಲೆಂಬ ಕಮಲ. ತೋಯಜ+ಆಪ್ತ—ಕಮಲ ಮಿತ್ರ, ಸೂರ್ಯ.

೩೭. ಈ ಪದ್ಯದ ಸೊಗಸನ್ನು ಗಮನಿಸಿ. ಈ ವೇಳೆಗೆ ಹಗಲು ಮುಗಿಯುತ್ತ ಬಂದಿತ್ತು. ಸೂರ್ಯನು ತನ್ನ ಚಿನ್ನದ ಕಿರಣಗಳನ್ನು ಮೆಲ್ಲಗೆ ಸೆಳೆದುಕೊಳ್ಳುತ್ತ ಮುಳುಗುತ್ತಿದ್ದನು. ಕತ್ತಲೆ ಮೆಲ್ಲಗೆ ಲೋಕವನ್ನು ಮು

ಕಿತು. ದಮಯಂತಿಯನ್ನು ನೋಡಲು ಬಂದ ದೇವತೆ(ಅನಿಮಿಷ)ಗಳಂತೆ, ಆಕಾಶ(ಅಂಬರ)ದಲ್ಲಿ ನಕ್ಷತ್ರ(ತಾರೆ)ಗಳು ಕಾಂತಿಯಿಂದ ಹುಟ್ಟಿದುವು. ಉತ್ಪ್ರೇಕ್ಷೆ.

೩೯. ತೂಳು—ಓಡು, ಭೇದಿಸು. ಮುಮ್ಮೊನೆ—ಸೈನ್ಯದ ಮುಂದು.

೪೦. ಬೊಮ್ಮ(ಧ್ಭ)—ಬ್ರಹ್ಮ.

೪೧. ಕೀಚಕನನ್ನು ನಾನು ಕೊಲ್ಲುವುದಿಲ್ಲ ಎಂದು ಭೀಮ ಹೇಳಿದಾಗ ದ್ರೌಪದಿ ಹೇಳುವ ಪದ್ಯದ ಛಾಯೆಯನ್ನಿಲ್ಲಿ ನೋಡಬಹುದು. ಅದರೊಡನೆ ಇದನ್ನು ಹೋಲಿಸಿದರೆ ಇದು ಸಪ್ಪೆ.

ಜನನವೇ ಪಾಂಚಾಲರಾಯನ। ಮನೆ ಮನೋವಲ್ಲಭರದಾರೆನೆ।
ಮನುಜಗಿನುಜರು ಗಣ್ಯರೇ ಗೀರ್ವಾಣರಿಂ ಮಿಗಿಲು॥
ಎನಗೆ ಬಂದೆಡರೀ ವಿರಾಟನ। ವನಿತೆಯರುಗಳ ಮುಡಿಯ ಕಟ್ಟುವ।
ತನುವ ತಿಗುರುವ ಕಾಲನೊತ್ತುವ ಕೆಲಸದುತ್ಸಾಹ॥

(ವಿರಾಟಪರ್ವ)

೪೪. ದಮಯಂತಿಯ ಚೆಲುವಿಕೆ ಕಷ್ಟಗಳ್ಳಿಗೆ ಸಿಲುಕಿ ಕಂದಿದ್ದರೂ, ನೋಡಲು ಮನೋಹರವಾಗಿತ್ತು. ದ್ರೌಪದಿ ವಿರಾಟನ ರಾಣಿಯ ಸಭೆಗೆ ಬಂದ ದೃಶ್ಯವನ್ನು ಇದರೊಡನೆ ಹೋಲಿಸಿ. ರಸ—ಪಾದರಸ. "ರಸದ ಹೊರ ಲೇಪದಲಿ ಮುಸುಕಿದ ಮಿಸುನಿಯಂದದಿ"—ಕುಮಾರವ್ಯಾಸ. ಪಾಂಚಾಲೀ ಸ್ವಯಂವರ ಕಾಲದಲ್ಲಿ ಬ್ರಾಹ್ಮಣರ ಸಭೆಯಲ್ಲಿದ್ದ ಧರ್ಮರಾಜನ ವರ್ಣನೆ. ಬಿಸಜ—ಕಮಲ.

೪೫. ದಮಯಂತಿ ಮಲಿನ ವಸ್ತ್ರವನ್ನು ಉಟ್ಟಿದ್ದರೂ ಅವಳ ರೂಪು ಎಲ್ಲರ ಕಣ್ಮನಗಳನ್ನು ಸೆಳೆಯುತ್ತಿತ್ತು. ಅವಳು ಉತ್ತಮ ಕುಲದಲ್ಲಿ ಹುಟ್ಟಿದವಳು ಎಂಬುದನ್ನು ಸಾರುತ್ತಿತ್ತು. ಆದ್ದರಿಂದಲೇ ರಾಣಿ ಆಕೆಯನ್ನು ಮೃದುವಾಗಿ ಮಾತನಾಡಿಸುತ್ತಾಳೆ.

೪೬. ಪ್ರಾಯ—ಹರಯ, ಯೌವನ. ಪೂರಾಯ—ಪ್ರವಾಹ.

೪೭. ವಿಕಳತನ—ಭ್ರಮೆ, ಹುಚ್ಚು. ಪರಹಿತ ಪುಣ್ಯ—ಇತರರಿಗೆ ಹಿತವನ್ನುಂಟುಮಾಡುವುದೇ ಪುಣ್ಯ.

೪೯. ಸಂಭಾವನೆ—ಮರ್ಯಾದೆ. ದೇಸಿಗ—ಭಿಕಾರಿ. ನಾನು ಭಿಕಾರಿಯಾದರೂ ಹೀನವಾದ ಕೆಲಸವನ್ನು ಮಾಡುವುದಿಲ್ಲ.

೫೦ ಸೈರಂಧ್ರಿ—ಪರಿಚಾರಿಕೆ? ಸಂಸ್ಕೃತಪದಗಳಿಗೆ ಕೇಶಿರಾಜನ ೪ ...ಯದಂತೆ ತನ್ನ ಪ್ರತ್ಯಯವನ್ನು ಸೇರಿಸಕೂಡದು.

೫೨. ದಗೆ—ಬೇಗೆ, ಸಂಕಟ. 'ಮನದ ದಗೆಯಡಗಿತು'—ವಿರಾಟ ಪರ್ವ, ೧-೩೧. ಸುನೀತೆ—ಚೈದ್ಯರಾಜನ ಮಗಳು. ಗಂಡನಿಗಾಗಿ ಹಂಬಲಿಸಿ ದಮಯಂತಿ ಅನ್ನಾದಿಗಳನ್ನು ಬಿಟ್ಟಳು.

## ೬. ನಿಲಿಸಿದನರಸ ಬಾಹುಕನ

ಇಲ್ಲಿಂದ ಮುಂದೆ ನಳನಿಗುಂಟಾದ ಅವಸ್ಥೆಯನ್ನು ಕವಿ ವರ್ಣಿಸುತ್ತಾನೆ.

೧. ಕಾಲವಾವನ ಕೀಳು ಮಾಡದು—ವಿಧಿಯ ನಿಯಮದಂತೆ, ಕಾಲಕ್ಕೆ ತಕ್ಕಂತೆ, ಮನುಷ್ಯನ ಐಶ್ವರ್ಯದಲ್ಲಿ ಏರುಪೇರಾಗುತ್ತದೆ. 'ಕಾಲವಾವನ ನಾವ ಪರಿಯಲಿ ಕೀಳುಮಾಡದು'—ವಿರಾಟಪರ್ವ.

೨-೩-೪. ದಮಯಂತಿಯನ್ನು ಮರೆದು ಮಲಗಿಸಿ ಬಂದಿದ್ದರೂ ನಳನಿಗೆ ಎದೆತುಂಬ ಅವಳದೇ ಚಿಂತೆ. ನಿದ್ರೆಯ ಕನಸ—ನಿದ್ರೆಯಲ್ಲಿ ಕನಸನ್ನು. ಪುರಾಕೃತ—ಹಿಂದೆ ಮಾಡಿದ. ದಮಯಂತಿಗೆ ತನ್ನಲ್ಲಿರುವ ಅಧಿಕವಾದ ಪ್ರೀತಿಯನ್ನು ನಳ ಹೇಳುತ್ತಾನೆ. ದೇವತೆಗಳನ್ನೂ ಮತ್ತು ಇತರ ರಾಜರನ್ನೂ ನೂಕಿ, ಆಕೆ ತನ್ನನ್ನೇ ಕೈಕೊಂಡಳು—ಸ್ವೀಕರಿಸಿದಳು, ಅಂಥವಳನ್ನು ಅಗಲಿದ ಪಾಪಿ ನಾನು.

೫. ಶ್ರೀಪತಿ—ಲಕ್ಷ್ಮಿಯ ಗಂಡ, ವಿಷ್ಣು. ನೆಲೆಗೊಳಿಸಿ—ಸ್ಥಾಪಿಸಿ. ಹುತವಹ—ಅಗ್ನಿ.

೬-೭. ಮೆಳೆ—ಗುಂಪು. ಹಿರಿದು+ಬಿದಿರು. ಕದಳಿ—ಬಾಳೆ. ಶಾರ್ದೂಲ—ಹುಲಿ. ಕಿಚ್ಚು—ಬೆಂಕಿ.

೯. ಬೆಂಕಿಯ ಮಧ್ಯದಲ್ಲಿ 'ನನ್ನ ಪ್ರಾಣ ಹೋಗುತ್ತಿದೆ, ಬೇಗ ಬಂದು ಕಾಪಾಡು' ಎಂಬ ಶಬ್ದ ಕೇಳಿಬಂತು. ಸ+ರಾಗ—ಪ್ರೀತಿಯಿಂದ ಕೂಡಿ. ಷಟ್+ಆಗಮ+ಜ್ಞ—ಆರು ಆಗಮಗಳನ್ನು ತಿಳಿದವನು. ಭೋಗಿ—ಹಾವು.

೧೦. ಸಂಚರಿಸದಂತಿರೆ ಶಾಪವನು ಕರೆದುಕೊಟ್ಟನು—ಅನ್ವಯ. ಎನಗೆ ಇದ ಪರಿಹರಿಸಲು (ಹೋಗಲು) ಎಂದಿಗೆ. ಪರಿಹರಿಪುದು ಎಂದಿದ್ದರೆ ಅರ್ಥ ಸುಗಮವಾಗುತ್ತದೆ.

೧೧. ಕಾಲಾಂತರ—ಕಾಲಕ್ರಮದಲ್ಲಿ. ಹಾರು—ಎದುರುನೋಡು.

೧೩. ಕಾರ್ಕೋಟಕನ ವಿಷದಿಂದ ನಳನ ದೇಹ ವಿಕಾರವಾಯಿತು. ಇದು ಪ್ರಸಿದ್ಧವಾದ ಪದ್ಯ. ಕೂನು—ಬಗ್ಗಿದ. ರೋಮ—ಕೂದಲು. ಹೆಡ್ಡ—ಏನೂ ಅರಿಯದವನು, ಮೂಢ.

೧೪. ನಳನ ಕಷ್ಟಗಳ ಜೊತೆಗೆ ಮಾರನಾಕಾರದ ಅವನಿಗೆ ವಿಕಾರವಾದ ರೂಪು ಒಂದು ಕುತ್ತಾಗಿ ಬಂದಿತು. ಅಳವು—ಶಕ್ತಿ. ತೋರ—ದೊಡ್ಡ. ಭೂರಿ—ದೊಡ್ಡ.

೧೫. ಹಿಂದೆ ಮಾಡಿದ ಕೆಟ್ಟ ಕರ್ಮ ನನ್ನ ಬೆನ್ನನ್ನು ಬಿಡದೆ ಇರಲಾಗಿ, ಇದಕ್ಕಾಗಿ ವ್ಯಥೆಪಟ್ಟು ಏನು ಉಪಯೋಗ? ಪನ್ನಗ+ಅರಿ+ಧ್ವಜ—ಹಾವುಗಳ ಹಗೆಯಾದ ಗರುಡನನ್ನೇ ಬಾವುಟವನ್ನಾಗಿವುಳ್ಳವನು, ವಿಷ್ಣು. ಬೆನ್ನ ಬಿಡುವುದೆ, ಪಾ.

೧೬. ಕಾಕು—ಹೀನ.

೧೭. ಇನ+ಕುಲ+ಅಂಬುಧಿ+ಚಂದ್ರ—ಸೂರ್ಯವಂಶವೆಂಬ ಸಮುದ್ರಕ್ಕೆ ಚಂದ್ರನಂತಿರುವವನು. ಅಕ್ಷದ ಹೃದಯ—ಪಗಡೆಯಾಟದ ಗುಟ್ಟು. ನಿನಗೆ ಆತನಲಿ ಅಕ್ಷದ ಹೃದಯು ಬಹುದು—ಅನ್ವಯ. ಅಶ್ವಹೃದಯ—ಕುದುರೆ ನಡಸುವ ಗುಟ್ಟು. ಅನುಗೊಳಿಸು—ಜೊತೆಮಾಡು, ಹೇಳಿಕೊಡು.

೧೮. ವಾಘೆ—ಕಡಿವಾಣ. ನಾಮ—ಹೆಸರು. ವೃತ್ತಿ—ಕೆಲಸ.

೧೯. ಪ್ರದನು—ಕೊಡುವವನು. ಶತಮನ್ಯು—ಇಂದ್ರ. ದೇವತೆಗಳಿಗೇ ಕಷ್ಟ ತಪ್ಪಲಿಲ್ಲ, ನೀನೇಕೆ ಸಂಕಟಪಡುವೆ ಎಂದು ಭಾವ. ಇಲ್ಲಿ ಬರುವ ಪೂರ್ವಕಥೆಗಳಿಗೆ ಪರಿಶಿಷ್ಟ (೧)ವನ್ನು ನೋಡಿ.

೨೦. ಮಲಿತು—ಕೊಬ್ಬಿ. ಗಹ್ವರ—ಪೊದರು. ಜನಪದ—ದೇಶ. ಅಲಸು—ಬೇಸರಪಡು.

೨೧. ತಟಾಕ—ಕೊಳ. ಪ್ರಾಂತ್ಯ—ಸಮೀಪ.

೨೪. ಮಂದಭಾಗ್ಯ—ಹೀನಭಾಗ್ಯ, ಅದೃಷ್ಟವಿಲ್ಲದವನು.

೨೬. ಕದನಗ(ಕ)ಲಿ—ಯುದ್ಧದಲ್ಲಿ ಶೂರ.

೨೭. ಸೂವಾರವಿದ್ಯೆ—ಅಡಿಗೆಯ ವಿದ್ಯೆ.

೨೮. ಸೂಪಕಾರ್ಯ-ಅಡಿಗೆಯ ಕೆಲಸ. ಕಾಪುರುಷ-ಸಾಮಾನ್ಯ ಮನುಷ್ಯ.

೨೯. ಮಡ—ಹಿಮ್ಮಡಿ. ಸಂಜ್ಞಾ (ಸಂ) ಸನ್ನೆ, ಸೂಚನೆ.

೩೧. ಮುರುಹು—ತಿರುಹು. ಓಸರಿಸು—ಓರೆಮಾಡು. ವಾರುವ—ಕುದುರೆ.

## ೭. ಭೀಮನೃಪ ಕರಸಿದ ತನ್ನ ನಿಜಸುತೆಯ

೧. ಸನಾಮ—ಹೆಸರುಳ್ಳವನು. ವಿಕರ್ಮ—ಕೆಟ್ಟಕರ್ಮ. ವಿರಾಮಾಗು—ಕಳೆದುಹೋಗು. ನೈಷಧಭೂಮಿಪನ (ಪಾ.)

೪. ಉನ್ನತಿ—ಹೆಚ್ಚಿಗೆ. ಮಾರುತನ ಸಖ—ಗಾಳಿಯ ಸ್ನೇಹಿತ, ಅಗ್ನಿ. ಪುಗು > ಹೊಗು—ಪ್ರವೇಶಮಾಡು. ಅತಿವಚನ—ಹೆಚ್ಚಾದ ಮಾತು. ಕ್ಷಿತಿಪ ಕೇಳಂತವರು ಬರುತಿರೆ। ಮತಿಯುತನೆ ಚಿಂತೆಯನು ಬಿಡು ಪತಿ। ವ್ರತೆಗೆ ಹಾನಿಯೆ ಸುಖದೊಳಿಹಳೆಂದುದು ನಭೋವಚನ॥ ಪಾ. ನಿನದ—ಮಾತು.

೫. ಇದು ಆನಂದ ಮತ್ತು ತೇಜೋರೂಪಿಯಾದ ಪರಮಾತ್ಮನ ಮಾತು. ಜ್ಯೋತಿರ್ಮಯ—ತೇಜಸ್ಸಿನಿಂದ ಕೂಡಿದವನು.

೬. ರಜನಿ—ರಾತ್ರಿ. ತಲೆ+ತೋರು—ಕಾಣಿಸಿಕೊಳ್ಳು.

೭. ನಿರುತ—ಸತ್ಯ. ಇರಿಕೆಗಾಂಬುದು (ಪಾ.)

೯. ಕ್ರತುಸಮಯ—ಯಜ್ಞದ ಕಾಲ. ಮೃಷ್ಟಭೋಜನ—ಒಳ್ಳೆಯ ಊಟ. ಮಿಗಿಲು+ಅಹುದು—ಹೆಚ್ಚಾಗಿ ದೊರಕುತ್ತದೆ.

೧೦. ಅವನೀ+ಸುರ—ಭೂಮಿಗೆ ದೇವತೆ, ಬ್ರಾಹ್ಮಣ. ಅನಿಲ (ಗಾಳಿ) ಸಖ—ಅಗ್ನಿ. ಮಹಾಸತಿ—ಪತಿವ್ರತೆ.

೧೧. ಮುಗಿಲ ಮರೆಯಲ್ಲಿ ಚಂದ್ರನ ಕಾಂತಿ ಸ್ಪಷ್ಟವಾಗಿ ಕಾಣಿಸುವುದಿಲ್ಲ. ಹಗಲಿನಲ್ಲಿ ದೀಪ ಉರಿದರೂ ಸೂರ್ಯನ ಕಾಂತಿಯಲ್ಲಿ ಅದು ಮಂಕಾಗಿರುತ್ತದೆ. ಹೊಗೆಯಿಂದ ಚಿತ್ರದ ಪ್ರತಿಮೆ ಮಾಸಿಹೋಗಿರುತ್ತದೆ. ಹಾಗೆಯೇ ದಮಯಂತಿಯ ಕಾಂತಿ ಅವಳುಟ್ಟ ಬಟ್ಟೆಯಿಂದ ಮಂಕಾಗಿತ್ತು. ಆದರೂ ನೋಡಿದವರಿಗೆ ಆಕೆ ಯಾವಳೋ ಒಬ್ಬ ಮಹಾಸತಿಯೆಂದು ತಿಳಿದುಬರುತ್ತಿತ್ತು. ಉಗಿದು—ಹೊರಕ್ಕೆ ಸೆಳೆದು.

೧೨. ಸುದೇವ ಅನುಮಾನದಿಂದಲೇ ಮಾತನಾಡಿಸುತ್ತಾನೆ. ದಮಯಂತಿಯನ್ನು ಆಕೆ ಯಾರು ಏನು ಎಂಬುದನ್ನು ವಿಚಾರಿಸದೆ, ನೇರವಾಗಿ ದಮಯಂತಿಯೆಂದೇ ತಿಳಿದು ಅವಳನ್ನು ಸಂಬೋಧಿಸುತ್ತಾನೆ.

೧೩. ವಂದ್ಯ—ಶ್ರೇಷ್ಠ.

೧೪. ಅತಿಶಯರು—ಉತ್ತಮ ಸ್ಥಿತಿಯಲ್ಲಿದ್ದಾರೆ. ಶೋಕ+ಅಬ್ಧಿ—ದುಃಖಸಮುದ್ರ.

೧೬. ಬುಧ—ವಿದ್ವಾಂಸ.

೧೮. ವಿಟಾಳಿಸು—ಕುಂದು.

೧೯. ಸಮುಪಾಳಿ—ಜೊತೆ. ತಳ್ಕಿಸು—ಆಲಂಗಿಸು, ಅಪ್ಪು.

೨೦. ತರುಣಿ ದಮಯಂತಿಯನು ಕಂಡೆನು। ಹರುಷ ಮಿಗಲಾ ಚೈದ್ಯಪುರದಲಿ। ವರಜನನಿ ಚಿಕ್ಕಮ್ಮನಲ್ಲಿಹಳೆಂದನಾ ವಿಬುಧ. ಪಾ.

೨೩. ಮಂಡೆ—ತಲೆ. ದಮಯಂತಿ ಗಂಡನನ್ನು ಅಗಲಿದ ದುಃಖದಲ್ಲಿ ಊಟ ಉಪಚಾರ, ಅನ್ನ ನಿದ್ರೆ ಇವುಗಳ ವಿಚಾರದಲ್ಲಿ ಅಲಸಿಕೆಯನ್ನು ಹೊಂದಿದ್ದಾಳೆ ಎಂದು ಭಾವ. ದಂಡಿಸು—ಸವೆಸು.

೨೭. ದಂಡಿಗೆ—ಪಲ್ಲಕ್ಕಿ. ಕಂಧರ—ಕತ್ತು.

೨೮. ಒಸಗೆ—ಶುಭಸಮಾಚಾರ. ಜಾತ—ಸಮೂಹ. ಬಲ+ಸಂಗಾತ—ಸೈನ್ಯದೊಡನೆ. ತಕ್ಕೈಸು—ಆಲಂಗಿಸು.

೩೦. ಇಂದ್ರಸೇನ—ನಳದಮಯಂತಿಯರ ಮಗ. ಚಂದ್ರ+ಆಸ್ಯ—ಚಂದ್ರನಂತೆ ಮುಖ. ಉಗು—ಹೊರಸೂಸು. ಸಂತೋಷವಾದಾಗ ತಾಯಿಯರಿಗೆ ಮೊಲೆಯಿಂದ ಹಾಲು ಸ್ರವಿಸುತ್ತದೆ. ಹಾಲಿನ ಜನನಿ—ಹಾಲು ಬೀಳುತ್ತಿರುವ ತಾಯಿ.

೩೧. ಕಂತುಪಿತ—ಮನ್ಮಥನ ತಂದೆ, ವಿಷ್ಣು. ಮನಗುಂದು—ಕುಗ್ಗು. ಭೀಮನೃಪನಿಗೆ ಸಂತೋಷವಾದರೂ ದಮಯಂತಿಗೆ ಮಾತ್ರ ನಳನ ಯೋಚನೆಯೇ ಮನಸ್ಸನ್ನು ಮುಸುಕಿತ್ತು.

## ೮. ದಮಯಂತಿಯನು ಕೂಡಿದನು ನಳನೃಪತಿ

ನಳನು ದಮಯಂತಿಯನ್ನು ಕಾಡಿನಲ್ಲಿ ಬಿಟ್ಟು ಹೋದನಷ್ಟೆ. ವೈಶ್ಯರ ಸಹಾಯದಿಂದ ಚೈದ್ಯನಗರಿಗೆ ಬಂದು, ಅಲ್ಲಿಂದ ತೌರುಮನೆಗೆ ಬರುವ ಹೊತ್ತಿಗೆ ದಮಯಂತಿಯ ಕಷ್ಟದಲ್ಲಿ ಅರ್ಧಪಾಲು ಕಳೆಯಿತು. ಇನ್ನು ಮುಂದಿನದು ನಳನನ್ನು ಗೊತ್ತುಮಾಡುವ ಕಾರ್ಯ.

೧. ತೊರೆ—ಬಿಡು. ಪೂರ್ವೋತ್ತರ—ಹಿಂದುಮುಂದಿನ ಸಮಾಚಾರ.

೨. ಸೋತು+ಅರಣ್ಯ—ಸೋತರಣ್ಯ ಎಂದಿರಬೇಕು. ಛಂದಸ್ಸಿಗಾಗಿ ಆರಣ್ಯ ಎಂಬ ರೂಪ ಬಂದಿದೆ. ಗುಪ್ತ>ಗುಪಿತ, ಗುಟ್ಟು. ಉಪಮೆ—ಹೋಲಿಕೆ. ಕೃಪಣತನ—ಲೋಭ, ಆಸೆ.

೪. ವಿಹೀನೆ—ಇಲ್ಲದವಳು. ಸಲುವುದೇ—ಉಂಟಾಗುವುದೇ. ಶ್ರುತಿ—ವೇದ. ಕಿವಿಯಿಂದ ಕೇಳತಕ್ಕದ್ದು. ಬರವಣಿಗೆ ಇಲ್ಲದ ಕಾಲದಲ್ಲಿ ತಂದೆಯಿಂದ ಮಗನಿಗೆ, ಗುರುವಿನಿಂದ ಶಿಷ್ಯನಿಗೆ ಕಿವಿಯ ಮೂಲಕ ವೇದ ಇಳಿದು ಬಂತು. ಗಂಡನಿಲ್ಲದವಳಿಗೆ ವ್ರತ, ಒಳ್ಳೆಯ ಗತಿ, ಸುಖ—ಇವಾವುವೂ ಸಲ್ಲವು. ಸತಿ . . . ದೈವ—ಹೆಂಗಸರಿಗೆ ಗಂಡನೇ ದೇವರು.

೬. ಶರಧಿ ಮೇರೆಯೊಳೆಲ್ಲ ಭೇದಿಸಿ—ಸಮುದ್ರವೇ ಮೇರೆಯಾಗಿರುವ ಭೂಮಿಯ ಮೇಲೆಲ್ಲ ಹುಡುಕಿ.

೮. ಸತ್+ಮಾನ—ಮರ್ಯಾದೆ. ಮಾನವರಿಗೆ+ಇಂದ್ರ—ಮನುಷ್ಯರಿಗೆ ಒಡೆಯ, ರಾಜ. ಪಥ—ದಾರಿ.

೧೧. ಕೈಯಂ+ನೆಗಹಿ—ಕೈಯೆತ್ತಿ. ಸಾಮಾಜಿಕ—ಸದಸ್ಯ. ಉರುತರ—ಅತಿಶಯ, ಹೆಚ್ಚಾದ.

೧೨. ಅಲಸು—ಬೇಸರಪಟ್ಟುಕೊಳ್ಳು. ಸತ್ಯದ ಬಳಕೆ—ಸತ್ಯದ ನಡತೆ.

೧೩. ತನ್ನ ತಪ್ಪನ್ನು ಮುಚ್ಚಿಕೊಳ್ಳಲು ಬಾಹುಕನು ಆಡುವ ಮಾತನ್ನು ನೋಡಿ. 'ಹೆಂಡತಿಯನ್ನು ಅಗಲಿದ ಪಾಪಿ ಗಂಡನೆನಿಸಿಕೊಳ್ಳಲು ಯೋಗ್ಯನಲ್ಲ. ಆ ಮಾತು ಹಾಗಿರಲಿ, ನೀವು ಹೇಳಿದಂತೆ ಯಾರಾದರೂ ಮಾಡಿದ್ದರೆ ಅದು ಹೆಂಡತಿಗೆ ವಂಚನೆಯಿಲ್ಲ. ಗಂಡನ ಯೋಗ್ಯತೆಗೆ ಊನ.'

೧೪. ಸಭೆಯಲ್ಲಿ ಎಲ್ಲರೂ ಸುಮ್ಮನಿದ್ದಾಗ ಈ ಕುರೂಪಿ ಏಕೆ ಮಾತನಾಡಿದ ಎಂಬ ಅನುಮಾನ ಅವರಿಗುಂಟಾಯಿತು. ಖ್ಯಾತರು—ಪ್ರಸಿದ್ಧಿ ಹೊಂದಿದವರು. ಸಂಜಾತೆ—ಹುಟ್ಟಿದವಳು, ಮಗಳು.

೧೫. ಜೀವಸಖ—ಪ್ರಾಣಸ್ನೇಹಿತ.

೧೬. ಬಾಣಸಿತನ—ಅಡಿಗೆಯ ಕೆಲಸ. ಪರುಠವಿಸು—ಸಿದ್ಧಮಾಡು.

೧೭. ವಿಕಳಮತಿ—ಬುದ್ಧಿಹೀನ. ಭಂಗ—ಅವಮಾನ. ಪತಿವ್ರತೆಯಾದವಳು ಗಂಡನ ಗುಣದೋಷಗಳನ್ನು ಗಣನೆಗೆ ತರುವುದಿಲ್ಲ,

೧೯. ವಿವರವ ತಿಳುಹಿ—ಬ್ರಾಹ್ಮಣನು ಮಾಡುವ ಕೆಲಸ ಗುಟ್ಟಾದ ಕೆಲಸವಾದ ಕಾರಣ ಅದರ ವಿವರಗಳನ್ನು ತಿಳಿಸಿ.

೨೦. ಮಟ್ಟಿ—ಗೋಪಿಚಂದನ. ಇರುಕು—ಸಿಕ್ಕಿಸಿಕೊಳ್ಳು. ಕಕ್ಷಪಾಳ—ಕಂಕುಳಚೀಲ. ಭಾಸುರ—ಮನೋಹರವಾದ. ಸೃಷ್ಟಿ—ಲೋಕ. ಪರಮೇಷ್ಠಿ-ಬ್ರಹ್ಮ.

ದ್ರೌಪದಿಯ ಸ್ವಯಂವರಕಾಲದಲ್ಲಿ ಮತ್ಸ್ಯಯಂತ್ರವನ್ನು ಭೇದಿಸಲು ಬಂದ ಅರ್ಜುನನ ವರ್ಣನೆಯುನ್ನು ಈ ಪದ್ಯದೊಡನೆ ಹೋಲಿಸಿ.

ತೊಟ್ಟ ಹೊಸ ಯಜ್ಞೋಪವೀತದ। ಮಟ್ಟಿ ನೊಸಲಲಿ ಕುಶೆಯ ಕರಡಿಗೆ।
ಕಟ್ಟಿಯಿರುಕಿದ ಕಕ್ಷೆ ಬೆರಳಲಿ ಮುರಿದ ದರ್ಭೆಗಳ ॥
ಉಟ್ಟ ಭಾಸುರ ಬಳಲುಗಚ್ಚೆಯುಲ। ಟ್ಟಹಾಸದ ಜನದ ನಗೆಗಳ।
ನಟ್ಟುವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ॥

೨೧. ದಮಯಂತಿಯ ಪುನಸ್ಸ್ವಯಂವರದ ಸಮಾಚಾರ ನಮಗೆ ಇಲ್ಲಿ ತಿಳಿಯುತ್ತದೆ. ನಳನನ್ನು ಪಡೆಯಲು ಎರಡನೆಯ ಸಾರಿ ತನಗೆ ಮದುವೆ

ಎಂದು ಸಾರಿದ ದಮಯಂತಿಯ ಧೈರ್ಯ ಎಷ್ಟಿರಬೇಕು !

೨೨. ನಯವಿಹೀನಳು—ಮರ್ಯಾದೆಯನ್ನು ಬಿಟ್ಟವಳು. ವಾಜಿ—ಕುದುರೆ. ದಮಯಂತಿಗೆ ಎರಡನೆಯ ಮದುವೆ ಸಾಧ್ಯವೇ ಅಲ್ಲವೆ ಎಂದು ವಿಚಾರಮಾಡದ್ದೇ ಇದ್ದದ್ದು ಋತುಪರ್ಣನ ಹೆಣ್ಣಿನ ಮೋಹವನ್ನು ತಿಳಿಸುತ್ತದೆ.

೨೩. ಹೈ, ಹಸಾದ—ಸರಿ, ಅಪ್ಪಣೆ. ಇದು ಕುಮಾರವ್ಯಾಸನ ಮಾತು. ಆದಿಪರ್ವ. ತನ್ನ ಹೆಂಡತಿಗೆ ಎರಡನೆಯ ಮದುವೆ ಎಂದು ಕೇಳಿದಾಗ ನಳನ ಮನಸ್ಸು ಹೇಗಾಗಿರಬೇಕು ! ಆದರೂ ಇದನ್ನು ಒಪ್ಪಲು ನಳನ ಮನಸ್ಸು ಒಡಂಬಡದು.

೨೪. ಲಾಯ—ಕುದುರೆ ಕಟ್ಟುವ ಸ್ಥಳ. ಪಾಯದಳ—ಕಾಲಾಳು.

೨೫. ಋತುಪರ್ಣನಿಗೆ ಬಾಹುಕನೇ ನಳನೆಂದು ತಿಳಿಯದು. ರಾಜನು ಸಾರಥಿಗೆ ಹೆಣ್ಣನ್ನು ನೋಡುವ ಆತುರವನ್ನು ತಿಳಿಸಿದಾಗ, ನಳನಿಗೆ ನಗುವೂ ಜೊತೆಗೆ ತನ್ನ ಹೆಂಡತಿಗೆ ಈ ಗತಿ ಬಂತೇ (ತನ್ನ ಎದುರಿಗೇ ರಾಜನು ಮಾನಿನಿಯನೀಕ್ಷಿಸಬೇಕು ಎನ್ನುತ್ತಿದ್ದಾನೆ!) ಎಂದು ದುಃಖವೂ ಆಯಿತು. ಶಾಸನ—ಅಪ್ಪಣೆ.

೨೭. ಮುನ್ + ಪರಿದು—ಮುಂದೆ ನುಗ್ಗಿ.

೨೮. ದಾಂಟು—ದಾಟು. ನಡುಗನ್ನಡದಲ್ಲಿ ಬಿಂದು ಲೋಪವಾಗುತ್ತದೆ. ಉದಾ: ತೋಂಟ—ತೋಟ, ಬೇಂಟೆ ಬೇಟೆ ಇತ್ಯಾದಿ.

೨೯. ಪರ್ಣ—ಎಲೆ. ಇಂದೆನಗೆ ಮತಿದೋರದು—ಈ ದಿನ ನನಗೆ ಬುದ್ಧಿ ತೋರದಾಗಿದೆ. ದಮಯಂತಿಯ ವರ್ತನೆಯನ್ನು ಯೋಚಿಸುತ್ತಿದ್ದ ನಳನಿಗೆ ಹೀಗಾಗುವುದು ಸಹಜವೇ ಆಗಿದೆ. ಸೂತ—ಸಾರಥಿ.

೩೦. ಶಾಖೆ—ಕೊಂಬೆ.

೩೧. ನೆಲೆ—ಸ್ಥಿತಿ, 'ನಿನ್ನ ಸತ್ಯದ ಪರೀಕ್ಷೆಗಾಗಿ ನಿನಗೆ ತೊಂದರೆ (ಅಳಲು) ಕೊಟ್ಟೆ. ಇದಕ್ಕಾಗಿ ಮನನೋಯಬೇಡ. ನಾನು ನಿನ್ನನ್ನು ಬಿಟ್ಟು ತೊಲಗಲು ನಿನಗೆ ಮಂಗಳವಾಗುತ್ತದೆ' ಎಂದು ಕಲಿ ಹೇಳಿದರೂ ನಳನು ಕೋಪಗೊಳ್ಳಲಿಲ್ಲ, ಶಾಪಕೊಡಲಿಲ್ಲ. ಅದಕ್ಕೆ ಪ್ರತಿಯಾಗಿ ಅವನನ್ನು ಕ್ಷಮಿಸಿದ. ಈ ರೀತಿ ಕಷ್ಟಪಡುವುದು ತನ್ನ ಹಣೆಯಲ್ಲಿ ಬರೆದಿದ್ದಿತೆಂದು ನಳನು ಸುಮ್ಮನಾದನೋ ಏನೋ !

೩೩. ಸೂಠಿ—ವೇಗ.

೩೪. ಹೇಷಾರವ—ಕುದುರೆಯ ಶಬ್ದ, ಕೆನೆತ. ಚೀತ್ಕೃತಿ—ಶಬ್ದ.

೩೮. ಬ್ರಾಹ್ಮಣನ ಮಾತನ್ನು ಕೇಳಿ ನಿಷಧ ಪಟ್ಟಣಕ್ಕೆ ಬಂದ ಋತುಪರ್ಣನಿಗೆ ಅಲ್ಲಿ ಮದುವೆಯ ಸಡಗರವಿಲ್ಲದುದನ್ನು ನೋಡಿ ನಿರಾಶೆಯಾಯಿತು. ಖಿನ್ನನಾಗು—ಕುಗ್ಗು. ಭಿನ್ನ—ಭೇದ, ವ್ಯತ್ಯಾಸ. ಸಂಪನ್ನ—ಕೂಡಿದವನು.

೩೯. ಮರೆಗೊಂಡು—ಮರೆಯಾಗಿ ಕುಬ್ಜ—ಗಿಡ್ಡ. ಓರೆಗಣ್ಣು—ಕುಡಿನೋಟ. ಚಾರುಚಿಹ್ನೆ—ಮನೋಹರವಾದ ರೂಪು, ಗುರುತು.

೪೦. ಒರೆದೊರೆದು—ಬಾರಿಬಾರಿಗೂ ಪರೀಕ್ಷೆಮಾಡಿ. ಉಮ್ಮಳಿಸು—ಸಂಕಟಪಡು.

ದಮಯಂತಿ ಬಾಹುಕನನ್ನು ಅಡಿಗೆಯ ವಿದ್ಯೆಯಲ್ಲಿಯೂ, ಮಕ್ಕಳನ್ನು ಅವನ ಬಳಿಗೆ ಕಳುಹಿಸುವುದರಿಂದಲೂ ಪರೀಕ್ಷೆಮಾಡಿ ಅವನು ನಳನೆಂದೇ ದೃಢಪಡಿಸಿಕೊಳ್ಳುತ್ತಾಳೆ.

೪೧. ಸೂಪಕಾರ—ಅಡಿಗೆಯವನು. ಭಾಮಿನಿ—ಹೆಂಗಸು.

೪೨. ಕರುಣಾಯತ-ಅಡಿಗೆಯ ಕೆಲಸದ ಕೈ ಚಳಕ. ಶಾಕ-ಕಾಯಿಪಲ್ಯ.

೪೩. ಧಾತ್ರೀ (ಸಂ)—ದಾದಿ.

೪೪. ಕಾಂಚನ—ಬಂಗಾರ. ದುಕೂಲ—ರೇಷ್ಮೆಯ ಬಟ್ಟೆ. ಬಹಳ ದಿನಕ್ಕೆ ಮಕ್ಕಳನ್ನು ನೋಡಿದ ನಳನಿಗೆ ಸಂತೋಷವಾಯಿತು.

೪೫. ಜಾಲಂಧ್ರ-ಕಿಟಕಿ. ಮಕ್ಕಳನ್ನು ನೋಡಿ, ಮುದ್ದಾಡಿ, ಆನಂದದ ಕಣ್ಣೀರನ್ನು ನಳನು ಸುರಿಸಿದುದರಿಂದ ದಮಯಂತಿಯ ಸಂಶಯ ತೊಲಗಿತು.

೪೬. ವಿಡಾಯ—ಆಡಂಬರ, ಠೀವಿ.

೪೭. ಅನುಮತ—ಅಪ್ಪಣೆ. ಗರಗರಿಗೆ ತಪ್ಪಿದ—ಸೊಗಸು ಹೋದ.

ಬಾಹುಕನನ್ನು ನೋಡಿ ದುಃಖದಿಂದ ದಮಯಂತಿಯ ಕತ್ತು ಬಿಗಿಯಿತು. ಅವನಿಗಾಗಿ ಆಕೆ ಮರುಗಿದಳು.

೪೮. 'ಹಿಂದಿನ ಕರ್ಮದ ಫಲವಾಗಿ ಚಕ್ರವರ್ತಿಯಾದ ನೀವು ಋತುಪರ್ಣನಲ್ಲಿ ಸೇವೆ ಮಾಡುವಂತಾಯಿತೇ? ಇದು ನನ್ನ ಪುಣ್ಯ ಸವೆದುದರ ಫಲ.'

೪೯—೫೦. ನಳನ ಕ್ಷಮೆಯನ್ನು ಬೇಡಿದ ದಮಯಂತಿಗೆ ಅವನಾಡುವ ಚುಚ್ಚುಮಾತುಗಳನ್ನು ಗಮನಿಸಿ.

'ನೀನು ಚಿಂತಿಸಬೇಡ, ಸಂಕಟಪಡಬೇಡ. ನಿನಗೆ ಎಲ್ಲ ವಿಚಾರಗಳೂ ಗೊತ್ತಿಲ್ಲವೇ? ಲೋಕದ ಪತಿವ್ರತೆಯರಿಗೆಲ್ಲ ನೀನು ಗುರುವಲ್ಲವೆ?' ನೀನು ಪತಿವ್ರತೆಯಾಗಿದ್ದರೆ ಈ ಎರಡನೆ ಮದುವೆಗೆ ಒಡಂಬಡುತ್ತಿರಲಿಲ್ಲ ಎಂದು ಭಾವ.

'ನಯನೀತಿಯನ್ನು ಅರಿಯದವನೂ, ನಿನ್ನ ವಿಷಯದಲಿ ಕರುಣೆಯಿಲ್ಲದವನೂ, ಕಾಡಿನಲ್ಲಿ ನಿನ್ನನ್ನು ಬಿಟ್ಟ ನೀಚ—ಇಂಥವನನ್ನು ನೀನು ನೆನೆಯುತ್ತಾರೆಯೇ? ಹುಚ್ಚಿ, ನಿನಗಿಂದು ಮತ್ತೆ ಸ್ವಯಂವರ ಏರ್ಪಟ್ಟಿದೆ. ನಿನ್ನ ಮನಸ್ಸಿಗೆ ಬಂದವನನ್ನು ಒಲಿದು ಮದುವೆಯಾಗು.'

೫೧. ಸಬಳ—ಕತ್ತಿ. ಗಂಡನಾಡಿದ ನಿಷ್ಠುರವಾದ ನುಡಿ ಕೇಳಿ ದಮಯಂತಿ ಕಣ್ಣೀರು ತುಂಬಿದಳು. ಉದಕ—ನೀರು. ಈ ಚಿತ್ರವನ್ನು ನಿಮ್ಮ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಿ. ಕಲ್ಪಿಸು—ಉಂಟುಮಾಡು, ಹರಡು.

೫೨. ಡೊಂಬು—ತೋರಿಕೆ. ರೂಪಿನಲಿ ಅಂಬುಜಾಕ್ಷ(ವಿಷ್ಣು)ನ ಪ್ರತಿಬಿಂಬವಲ್ಲವೆ ನೀವು?—ಅನ್ವಯ.

೫೩. ನಾನು ಕಷ್ಟಗಳನ್ನು ಅನುಭವಿಸಿ, ನಿಮ್ಮಿಂದ ಅಗಲಿ ಮೊದಲೇ ನೊಂದಿದ್ದೇನೆ. ಈಗ ನೀವು ಚುಚ್ಚು ಮಾತನಾಡಿ ನನ್ನನ್ನು ನೋಯಿಸುವುದು ಉಚಿತವಲ್ಲ.

೫೫. ನನ್ನ ಯೌವನ ನಿನಗೆ ಅರ್ಪಿತವಾಗಿದೆ. ದೇಹ, ಮನಸ್ಸು, ಮಾತು, ಕೆಲಸ ಎಂದರೆ ಮನಸ್ಸಿನಲ್ಲಿ, ಮಾತಿನಲ್ಲಿ, ಕಾರ್ಯದಲ್ಲಿ ನಿನಗೆ ಎರಡನ್ನು ಬಯಸಿದವಳಲ್ಲ. ಅದಕ್ಕೆ ಪ್ರತಿಯಾಗಿ ನೀನೇ ಗತಿಯೆಂದು ನಂಬಿದ್ದೇನೆ.

೫೬. ಅನಿಲ—ವಾಯು. ಮದನಜನಕ—ಮನ್ಮಥನ ತಂದೆ, ಕೃಷ್ಣ.

೫೭. ಬವಣೆ—ತೊಂದರೆ, ಸಂಕಟ. ಹಿಂಗು—ನಾಶವಾಗು. ಕೃತಾರ್ಥ ಧನ್ಯ.

## ೯. ನಳನೃಪ ಧರೆಯನಾಳಿದ ಪರಿ

ಪಾಂಡವರು ಅಜ್ಞಾತವಾಸ ಮುಗಿದಮೇಲೆ ತೊಳಗಿ ಬೆಳಗಿದುದನ್ನು ಈ ದೃಶ್ಯದೊಡನೆ ಹೋಲಿಸಿ.

೧. ಅಭ್ಯುದಯ—ಏಳಿಗೆ. ಲೀಲೆ—ಸಂತೋಷ.

೨. ತನ್ನ ಸಾರಥಿಯಾದ ಬಾಹುಕ ನಳನೆಂದು ತಿಳಿದಮೇಲೆ ಋತುಪರ್ಣನಿಗೆ ಹೇಗಾಗಿರಬೇಕು! ಮುದ—ಸಂತೋಷ.

೩. ರೂಢಿ—ಲೋಕ. ನೀನು ಸಾರಥಿಯಾದಾಗ, ಅಡಿಗೆ ಮಾಡಿದಾಗ ಅದರ ಕೈಚಳಕ, ಸವಿಯಿಂದಲೇ ನಿನ್ನನ್ನು ನಳನೆಂದು ಅರಿಯಲಿಲ್ಲವಲ್ಲ!

೪. ನಳನು ಕ್ಷಮಾಮೂರ್ತಿ. ತಾನು ಪಟ್ಟ ಕಷ್ಟಗಳಿಗೆ ಇನ್ನೊಬ್ಬರನ್ನೇಕೆ ಹೊಣೆಮಾಡಬೇಕೆಂಬುದು ಅವನ ಮನೋವೃತ್ತಿ.

೫. ಚರಣದ್ವಂದ್ವ—ಎರಡು ಕಾಲು. ಸದಾವಕಾಲದಿ—ಎಲ್ಲ ಕಾಲದಲ್ಲಿಯೂ.

೬. ಉಪಹತಿ—ತೊಂದರೆ.

೯. ಹಿರಣ್ಯ—ಬಂಗಾರ.

೧೧. ಒರ್ + ಬರಿಸ—ಒಂದು ವರುಷ. ಹಿಂದುಗಳೆ—ಕಾಲ ಕಳೆಯದೆ.

೧೨. ತಂಡ—ಗುಂಪು. ಉದ್ದಂಡ—ಕೊಬ್ಬಿದ.

೧೩. ಹಲ್ಲಣಿಸು—ಸಿದ್ಧವಾಗು. ಇಟ್ಟಣಿಸು—ಗುಂಪು ಕೂಡು.

೧೪. ಕಥಾಸಂಗ್ರಹಕ್ಕಾಗಿ ಈ ಪದ್ಯದ ಕೊನೆಯ ಸಾಲನ್ನು ತಿದ್ದಿದೆ.

೧೯. ಪುಷ್ಕರನ ಅಲ್ಪವಾದ ಮನಸ್ಸು ಇಲ್ಲಿ ಹೇಗೆ ಪ್ರಕಟವಾಗಿದೆ !

೨೦. ದುಗ, ಇತ್ತಿಗ—ಇವು ಪಗಡೆಯಾಟದ ಗರಗಳು.

೨೨. ಅಭ್ರ—ಆಕಾಶ. ಉತ್ತಮಾಂಗ—ತಲೆ. ಕೋವಿದ—ವಿದ್ವಾಂಸ.

೨೪. ಕೃತಘ್ನ—ಮಾಡಿದ ಉಪಕಾರವನ್ನು ಮರೆತವ.

೨೫. ಸೈಗೆಡೆ—ನಮಸ್ಕರಿಸು.

೨೬. ಸಿಂಧ—ಬಾವುಟ.

೩೦. ಎರಡು+ಕೆಲ—ಎರಡು ಪಕ್ಕ.

೩೨. ಪುಣ್ಯದ+ಉದಯ—ಏಳ್ಗೆಯುಳ್ಳವನು. ಸತ್ಯದಿಂದ ಅಲಂಕೃತನಾದವನು. ಸಂಗರ—ಯುದ್ಧ. ನಿಗಮ(ವೇದ)ಗಳಲ್ಲಿ ಕೋವಿದನು.

೩೩. ಕೈವಲ್ಯ—ಮೋಕ್ಷ. ಈ ರೀತಿಯ ಪುಣ್ಯಕಥೆಗಳನ್ನು ಬರೆದು, ಓದುವುದು ಒಂದು ಪುಣ್ಯದ ಕೆಲಸವೆಂದು ನಮ್ಮವರು ಭಾವಿಸಿದ್ದರು.

ಈ ಗ್ರಂಥವನ್ನು ಓದುವುದರಿಂದ, ಓದಿಸಿ ಕೇಳುವುದರಿಂದ, ಆಗುವ ಫಲವನ್ನು ಈ ಪದ್ಯದಲ್ಲಿ ಹೇಳಿದೆ. ಅಂದು ಕಷ್ಟದಲ್ಲಿದ್ದ ಧರ್ಮರಾಜನಿಗೆ ಇದನ್ನು ಕೇಳಿದುದರಿಂದ, ಕಷ್ಟ ನನ್ನೊಬ್ಬರಿಗೇ ಅಲ್ಲ, ಇತರರಿಗೂ ಉಂಟು, ಅವರು ಅದನ್ನು ತಾಳ್ಮೆಯಿಂದ ಸಹಿಸಿದರು ಎಂಬ ಅರಿವುಂಟಾಗಿ ಅವನು ತನ್ನ ಕಷ್ಟವನ್ನು ಸಹಿಸುವುದು ಸುಲಭವಾಯಿತು. ಮನಸ್ಸು ಮೃದುವಾಯಿತು. ಇಂದು ಈ ಕಥೆಯನ್ನು ಓದುವುದರಿಂದ ನಮಗೂ ಆ ಅನುಭವ ಉಂಟಾಗುತ್ತದೆ. ಕಷ್ಟಕಾಲದಲ್ಲಿ, ಕೀಳುಸ್ಥಿತಿಯಲ್ಲಿ ಶುಚಿಯಾಗಿ ಬಾಳಲು ಈ ಚರಿತ್ರೆ ನಮಗೆ ನೆರವಾಗುತ್ತದೆ.

ನಳದಮಯಂತಿಯರ ಚರಿತ್ರೆ ಒಂದು ದೀವಿಗೆ. ಅದು ಸಾವಿರಾರು ವರ್ಷಗಳಿಂದ ಸಾವಿರಾರು ಹೃದಯವನ್ನು ಬೆಳಗಿದೆ. ಇಂದು ಈ ಬೆಳಕನ್ನು ನಮ್ಮ ಎದೆಯಲ್ಲಿ ಹೊತ್ತಿಸಿಕೊಂಡು ನಾವು ಉದ್ಧಾರವಾಗಲು ಯತ್ನಿಸಬೇಕು.

# ಪರಿಶಿಷ್ಟ

## ೧

ಈ ಸಂಗ್ರಹದಲ್ಲಿ ಬರುವ ಪೂರ್ವಕಥೆಗಳು :

(i) ಭಿಕ್ಷಾನ್ನವನು ಬೇಡಿದನು ಪಶುಪತಿ (೬-೧೯)

ಹಿಂದೆ ಸತ್ಯಲೋಕದಲ್ಲಿ ಬ್ರಹ್ಮನ ಓಲಗದಲ್ಲಿದ್ದ ಋಷಿಗಳು ಬ್ರಹ್ಮನನ್ನು ಕುರಿತು 'ಲೋಕದಲ್ಲಿ ಎಲ್ಲರಿಗಿಂತ ಶ್ರೇಷ್ಠರು ಯಾರು ? ಆತನನ್ನು ಆರಾಧಿಸುತ್ತೇವೆ' ಎಂದ ಅವರ ಮಾತಿಗೆ ಬ್ರಹ್ಮನು 'ಈ ಲೋಕವನ್ನು ಸೃಷ್ಟಿ ಮಾಡುವವನು ನಾನು. ನನಗಿಂತ ಶ್ರೇಷ್ಠರು ಯಾರು ?' ಎಂದನು. ಅದಕ್ಕೆ ವಿಷ್ಣು 'ಬ್ರಹ್ಮನು ಲೋಕವನ್ನು ಸೃಷ್ಟಿಮಾಡುತ್ತಾನೆ. ನಾನು ಕಾಪಾಡುತ್ತೇನೆ. ಈಶ್ವರನು ಸಂಹಾರ ಮಾಡುತ್ತಾನೆ. ಆದ್ದರಿಂದ ಈಶ್ವರನೇ ದೊಡ್ಡವನು' ಎಂದನು. ಈ ಮಾತನ್ನು ಕೇಳಿ ಬ್ರಹ್ಮನಿಗೆ ಕೋಪ ಬಂದು, ಈಶ್ವರನನ್ನು ನಾನಾ ಪರಿಯಾಗಿ ನಿಂದಿಸಿದನು. ಇದರಿಂದ ಕೋಪಗೊಂಡ ಈಶ್ವರನು ತನ್ನ ಎಡಗೈ ಬೆರಳಿನ ಉಗುರಿನಿಂದ ಬ್ರಹ್ಮನ ಐದನೆಯ ತಲೆಯನ್ನು ಚಿವುಟಿ ತೆಗೆದನು. ಹಾಗೆ ಚಿವುಟಿ ತೆಗೆದ ಬ್ರಹ್ಮನ ತಲೆ ಈಶ್ವರನ ಕೈಯನ್ನು ಬಿಡದೆ ಅಂಟಿಕೊಂಡಿತು. ಈಶ್ವರನಿಗೆ ಇದರಿಂದ ಬ್ರಹ್ಮಹತ್ಯಾ ದೋಷ ಬಂತು. ಈ ದೋಷವನ್ನು ಕಳೆದುಕೊಳ್ಳಲು ಈಶ್ವರನು ಭಿಕ್ಷೆ ಬೇಡಿ, ಕೊನೆಗೆ ಅನ್ನಪೂರ್ಣಾದೇವಿಯ ಅನುಗ್ರಹದಿಂದ ಈ ಪಾಪವನ್ನು ಕಳೆದುಕೊಂಡನು.

(ii) ಶತಮನ್ಯು ಬನದಲಿ ನವೆಯನೆ (೬-೧೯)

ಜಾತಿಯಲ್ಲಿ ಬ್ರಾಹ್ಮಣನೂ, ವೃತ್ತಿಯಲ್ಲಿ ರಾಕ್ಷಸನೂ ಆದ ವೃತ್ರಾಸುರನನ್ನು ಇಂದ್ರನು ಕೊಂದುದರಿಂದ ಅವನಿಗೆ ಬ್ರಹ್ಮಹತ್ಯಾದೋಷ ಬಂತು. ಇದರಿಂದ ತಲೆಯೆತ್ತಲಾರದೆ ಇಂದ್ರನು ಲೋಕದ ಕೊನೆಯನ್ನು ಸೇರಿ, ಅಲ್ಲಿ ಯಾರಿಗೂ ತಿಳಿಯದಂತೆ ನೀರಿನಲ್ಲಿ ಅಡಗಿಕೊಂಡಿದ್ದನು. ಆ ಕಾಲದಲ್ಲಿ ಇಂದ್ರನಿಲ್ಲದ ಸ್ವರ್ಗಕ್ಕೆ ನಹುಷನು ಅಧಿಪತಿಯಾದನು. ಋಷಿಗಳ ಮತ್ತು ದೇವತೆಗಳ ವರಬಲದಿಂದ ಅವನು ಪರಮತೇಜಸ್ವಿಯಾಗಿ ಬೆಳಗುತ್ತಿದ್ದನು. ಅವನಿಗೆ ಇಂದ್ರಪತ್ನಿಯಾದ ಶಚಿಯಲ್ಲಿ ಮೋಹ ಹುಟ್ಟಿತು. ಅವನ ಕಾಟವನ್ನು ಸಹಿಸಲಾರದೆ ಶಚಿ ಬೃಹಸ್ಪತಿಯನ್ನು ಮರೆಹೊಕ್ಕಳು. ದೇವಗುರು

ಅವಳಿಗೆ ಅಭಯಪ್ರಧಾನ ಮಾಡಿದನು. ಗಂಡನ ವಿಚಾರ ಚೆನ್ನಾಗಿ ತಿಳಿದ ಮೇಲೆ ತಾನು ನಹುಷನ ಬಳಿಗೆ ಬರುವುದಾಗಿ ಆಕೆ ಅವನಿಗೆ ಮಾತು ಕೊಟ್ಟಳು. ನಹುಷನೂ ಶಚಿಯ ಮಾತಿಗೆ ಸಂತೋಷದಿಂದ ಒಪ್ಪಿದನು. ಈ ನಡುವೆ ದೇವತೆಗಳು ವಿಷ್ಣುವಿನ ಮಾತಿನಂತೆ ಇಂದ್ರನ ಬ್ರಹ್ಮಹತ್ಯಾ ದೋಷ ಹೋಗಲು ಅಶ್ವಮೇಧಯಾಗ ಮಾಡಿದರು. ಇದರಿಂದ ಬ್ರಹ್ಮ ಹತ್ಯಾದೋಷ ಹೋದರೂ, ಇಂದ್ರನು ನಹುಷನ ತೇಜಸ್ಸನ್ನು ನೋಡಲು ಅಸಾಧ್ಯವಾಗಿ, ನೀರಿನ ನಡುವೆ ತಾವರೆಯ ದಂಟಿನ ನಾಳದಲ್ಲಿ ಅಡಗಿ ಕೊಂಡನು. ಇಂದ್ರನ ಸಲಹೆಯಂತೆ ಶಚಿ ನಹುಷನನ್ನು, ಮಹರ್ಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ತನ್ನೆಡೆ ಬರುವಂತೆ ಬೇಡಿಕೊಂಡಳು. ಹಾಗೆ ಬರುತ್ತಿರುವಾಗ, ಅವನಿಗೂ ಋಷಿಗಳಿಗೂ ವಾದವಿವಾದಗಳುಂಟಾಗಿ ಅಗಸ್ತ್ಯನನ್ನು ಕಾಲಿನಿಂದೊದ್ದು ಅವರ ಶಾಪದಿಂದ ಸರ್ಪವಾದನು. ಇತ್ತ ಅಗ್ನಿ ಅಡಗಿದ್ದ ಇಂದ್ರನನ್ನು ಹುಡುಕಿದನು. ಹೀಗೆ ಇಂದ್ರನು ಬಹು ಕಷ್ಟ ಪಟ್ಟು ಕೊನೆಗೆ ಸುಖ ಕಂಡನು.*

೨

## ಛಂದಸ್ಸು

ನಾವು ಮಾತನಾಡುವಾಗಲೂ, ಬರೆಯುವಾಗಲೂ ಗದ್ಯವನ್ನು ಉಪಯೋಗಿ ಸುತ್ತೇವೆ. ಆದರೆ ಪದ್ಯವನ್ನು ಬರೆಯುವಾಗ ಕೆಲವು ವಿಶೇಷ ನಿಯಮಗಳನ್ನು ಅನುಸರಿಸುತ್ತೇವೆ. ಈ ನಿಯಮಗಳನ್ನು ತಿಳಿಸುವ ಶಾಸ್ತ್ರಕ್ಕೆ 'ಛಂದಶ್ಶಾಸ್ತ್ರ' ವೆಂದು ಹೆಸರು.

ಪದ್ಯ ಎಂದರೆ ಪಾದಗಳುಳ್ಳದ್ದು ಎಂದರ್ಥ. ಈ ಸಂಗ್ರಹದಲ್ಲಿ ಬರುವ ಯಾವ ಪದ್ಯವನ್ನಾದರೂ ಗಮನಿಸಿ. ಈ ಪದ್ಯಗಳಲ್ಲಿ ಆರು ಪಾದಗಳು ಅಥವಾ ಆರು ಸಾಲುಗಳಿವೆ. ಆದ್ದರಿಂದ ಇದನ್ನು 'ಷಟ್ಪದಿ' ಎನ್ನುತ್ತಾರೆ. ಈ ಸಾಲುಗಳಲ್ಲಿ ಪ್ರತಿಯೊಂದರ ಎರಡನೆಯ ಅಕ್ಷರವನ್ನು ಗಮನಿಸಿ. ಒಂದು ಪದ್ಯದಲ್ಲಿ ಪ್ರತಿಯೊಂದು ಸಾಲಿನ ಎರಡನೆಯ ಅಕ್ಷರ ಸಾಮಾನ್ಯವಾಗಿ ಒಂದೇ ತೆರನಾದ ವ್ಯಂಜನವಾಗಿರುತ್ತದೆ. ಇದಕ್ಕೆ 'ಪ್ರಾಸ' ಎಂದು ಹೆಸರು. ಇದು ಪದ್ಯದ ಮೊದಲಲ್ಲಿ ಬರುವುದರಿಂದ ಇದನ್ನೇ 'ಆದಿಪ್ರಾಸ' ಎನ್ನು ತ್ತಾರೆ.

* ಸಂಸ್ಕೃತ ಮಹಾಭಾರತ ಉದ್ಯೋಗಪರ್ವ

ಷಟ್ಪದಿಗಳಲ್ಲಿ ಆರು ವಿಧ. ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ—ಇವೇ ಆ ಆರು ಷಟ್ಪದಿಗಳು. ನಳಚರಿತ್ರೆಯನ್ನು ಭಾಮಿನೀಷಟ್ಪದಿಯಲ್ಲಿ ಬರೆದಿದೆ. ಇವುಗಳನ್ನು ಹಾಡುವ ರೀತಿಯಲ್ಲಿ ಅರಿತುಕೊಂಡರೆ ಈ ಷಟ್ಪದಿಯ ಲಕ್ಷಣಗಳನ್ನು ಮನದಟ್ಟುಮಾಡಿಕೊಳ್ಳಬಹುದು. 'ಕಾಲವಾವನ ಕೀಳುಮಾಡದು' ಈ ಪಾದವನ್ನು ಓದುವಾಗ ನಾವು ನಾಲ್ಕು ಕಡೆ ಅಕ್ಷರಗಳನ್ನು ಒತ್ತಿ ಉಚ್ಚರಿಸುತ್ತೇವೆ. (ಕಾ, ವಾ, ಕೀ, ಮಾ.) ಒಂದು ಕಡೆ ಒತ್ತಿ ಉಚ್ಚರಿಸಿ ಮತ್ತೊಂದು ಕಡೆ ಒತ್ತಿ ಉಚ್ಚರಿಸುವವರೆಗೆ ಇರುವ ಅಕ್ಷರಗಳ ಗುಂಪಿಗೆ 'ಗಣ'* ಎಂದು ಕರೆಯುತ್ತಾರೆ. ಮೇಲಿನ ಉದಾಹರಣೆಯಲ್ಲಿ 'ಕಾಲ' 'ವಾವನ' 'ಕೀಳು' 'ಮಾಡದು' ಎಂದು ನಾಲ್ಕು ಗಣಗಳಿವೆ. 'ಗಣ' ಎಂದರೆ ಗುಂಪು ಎಂದರ್ಥ. ಒಂದು ಗಣದ ಸ್ವರೂಪವನ್ನು ತಿಳಿಯಲು ಅದರಲ್ಲಿ ಬರುವ ಮಾತ್ರೆಗಳನ್ನು ಗಮನಿಸಬೇಕು. ಒಂದು ಹ್ರಸ್ವಸ್ವರವನ್ನು ಉಚ್ಚರಿಸುವಷ್ಟು ಕಾಲಕ್ಕೆ ಒಂದು ಮಾತ್ರೆ—ಲಘು—ಎಂದು ಕರೆಯುತ್ತಾರೆ. ದೀರ್ಘ ಸ್ವರವನ್ನು ಉಚ್ಚರಿಸುವಷ್ಟು ಕಾಲಕ್ಕೆ ಎರಡು ಮಾತ್ರೆ—ಗುರು ಎಂದು ಕರೆಯುತ್ತಾರೆ. ಹ್ರಸ್ವಸ್ವರದಿಂದ ಕೂಡಿದ ಅಕ್ಷರ, ಲಘು. ದೀರ್ಘಾಕ್ಷರವೂ, ಅನುಸ್ವಾರ, ವಿಸರ್ಗಗಳಿಂದ ಕೂಡಿರುವ ಅಕ್ಷರಗಳೂ, ಒತ್ತಕ್ಷರದ ಹಿಂದಿನ ಅಕ್ಷರವೂ ಗುರುಗಳು. ಕೀಳು—೩ ಮಾತ್ರೆ, ಮಾಡದು—೪ ಮಾತ್ರೆ ಆಗುತ್ತದೆ. (+೩+೪) ಇದು ಭಾಮಿನೀಷಟ್ಪದಿಯ ಮೊದಲನೆಯ ಸಾಲಾಯಿತು. ಎರಡನೆಯ, ನಾಲ್ಕನೆಯ ಮತ್ತು ಐದನೆಯ ಸಾಲುಗಳೂ ಹೀಗೆಯೇ ಇರುತ್ತವೆ. ಆದರೆ ಮೂರು ಮತ್ತು ಆರನೆಯ ಸಾಲಿನಲ್ಲಿ ೩, ೪, ೩, ೪, ೩, ೪—ಹೀಗೆ ಆರು ಗಣಗಳೂ, ಅದರ ಮೇಲೆ ಒಂದು ಗುರುವೂ (ಲಘು ಬಂದ ಕಡೆ ಅದನ್ನು ಎಳೆದು ಗುರು ಮಾಡಿಕೊಳ್ಳಬೇಕು) ಬರುತ್ತದೆ.

ಇದಕ್ಕೆ ಸಂಬಂಧಿಸಿದ ಹೆಚ್ಚಿನ ವಿಷಯಗಳನ್ನು 'ಕನ್ನಡ ಕೈಪಿಡಿ' ಎಂಬ ಗ್ರಂಥದಿಂದ ತಿಳಿದುಕೊಳ್ಳಬಹುದು.

---

* ಗಣಗಳಲ್ಲಿ ಅಕ್ಷರಗಣ, ಮಾತ್ರಾಗಣ ಎಂದು ಸಾಮಾನ್ಯವಾಗಿ ಎರಡು ವಿಧ. ಮೂರು ಮೂರು ಅಕ್ಷರಗಳಿಗೆ ಒಂದೊಂದು ಗುಂಪಾಗಿ ವಿಂಗಡಿಸುವುದಕ್ಕೆ ಅಕ್ಷರಗಣವೆಂದು ಹೆಸರು. ಮಾತ್ರಾಗಣ ಮಾತ್ರೆಗಳಿಂದ ನಿರ್ಧರವಾಗತಕ್ಕದ್ದು.

೩

ಈ ಸಂಗ್ರಹದ ಎಂಟನೆಯ ಸಂಧಿಯಲ್ಲಿ ಬರುವ ೩೭, ೩೮, ೩೯, ೪೦, ೪೧, ೪೨ನೆಯ ಪದ್ಯಗಳಿಗೆ ಪ್ರತಿಯಾಗಿ, ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟನಲ್ಲಿರುವ ಓಲೆಯ ಪ್ರತಿಯಲ್ಲಿ ಈ ಕೆಳಗೆ ಕಂಡ ಪದ್ಯಗಳಿವೆ. ಅವುಗಳನ್ನು ಅಲ್ಲಲ್ಲೇ ತಿದ್ದಿಕೊಟ್ಟಿದೆ. ತಿದ್ದಿದ ಭಾಗವನ್ನು ಚೌಕ ಕಂಸದಲ್ಲಿ ಕೊಟ್ಟಿದೆ.

ರಾಯನೈತಂದಾ ಸುವಾರ್ತೆಯ। [ನಾಯುವತಿ] ದಮಯಂತಿ [ಯಲಿ ನಿ]।
ರ್ಧಾಯದಲಿ] ಬಂದುಸುರೆ ಹರುಷಿತೆಯಾಗಿ ಒಲವಿಂದ।
ತಾಯಿತಂಗೆಯು ಬಳಿಗೆ ಬಂದು ವಿ। ಡಾಯದಲಿ ನಿಜರಮಣನಿಂಗಿತ।
ದಾಯವನು [ನೆರೆ] ಪೇಳ್ವೆನೆನುತಿಂತೆಂ[ದಳವರಿಂಗೆ]॥
ಜನನಿ ಜನಕನೊಳೆಂದಳಾಗಳೆ। ವನಜಮುಖಿ ದಮಯಂತಿ ರಮ।
ಣನ ಮಹತ್ವವನಗ್ನಿಜಲವಿಲ್ಲದೆ ಸುಪಾಕವನು॥
ಅನುನಯದೊಳಾಗಿಪನು ನೀವಿದ। ಕನುವ ನೆನೆಯುವುದೆನಲು[ವಿ]ದರ್ಭ।
[ಜನಪತಿಯಾಗ ಪಟ್ಟ]ಮಂತ್ರಿಯೊಳೆಂದನೀ ಹದನ॥
ಮತಿಯುತನೆ ಕೇ[ಳ್ಳೆ] ಮತ್ಸುತೆಯು! ಪತಿಯಿಂ[ದ]ಯೋಧ್ಯಾಪತಿಗೆ ಸಾ।
ರಥಿಯಾಗಿ ಬಹ[ನಾತನಾ ಸೂದಾರ]ವಿದ್ಯೆಯಲಿ॥
ಅತಿ[ನಿಪುಣ] ಗಡ ವಹ್ನಿಜಲವ। ರ್ಜಿತದ ಪಾಕಂಗೈವ ಗಡ ನಿಜ।
ಸುತೆಯು ಮತದಿಂದ ಕೇಳ್ದೆವಿದನರಿವಂದವೆಂತೆಂದ॥
ಧಾರಿಣೀಪತಿ ಕೇಳಯೋಧ್ಯಾ। ಭೂರಮಣಗೊಲಿದೀನ ಪೊಸಬೀ।
ಡಾರದೊಳು ಸಂಬಾರಮುಂತಾದಖಿಳವಸ್ತುಗಳ॥
ಸಾರತರದಿಂದಿಟ್ಟು ಬಳಿಕಾ। ಮಾರುತಾಪ್ತನ ನಿರ್ಮಲಾಂಬುವ!
ಸಾರೆ ಕೊಡದಿರೆ ತಿಳಿವುದದರಂತರವು ಕೇಳೆಂದ॥
ದೂತಮು[ಖದಿಂದ]ರಸಿಯಲ್ಲಿಯ। ಮಾತುಗಳ ಮರ್ಮವ ನಳನೃಪತಿ।
ಯೈತರಲು ಪಾಕಾದಿಗಳನನುಗೊಳಿಸಿ ಭುಂಜಿಪರು॥
ಪ್ರೀತಿಹೊತ್ತಂಬುಗಳ ಕೇಳಲು। ಸೂತ ಬಾರದ ಪರಿಯದೆಂಬೀ।
ಮಾತಿನಿಂ[ದಾ]ಚರಿಪುದೆಂ[ದನು] ಮಂತ್ರಿ ವಿನಯದಲಿ॥ (?)
ಭೀಮನೃಪನಾ ಮಾತಿನಲಿ ಬಳಿ। ಕಾ ಮಹಾಸಂತಸದಿ ಘನತರ।
ರಾಮಣೀಯಕವಾದ ವಸ್ತುಸ್ತೋಮವೆಲ್ಲವನು॥
ತಾಮುಸಂಗೈದೊರೆದು ಕೊಡಿಸಿದ। ನೇಮದಿಂದಾ ಮಂತ್ರಿಶೇಖರ।
ನಾಮುಹೂರ್ತದೊಳಖಿಳವಸ್ತುವ ಕಳುಹಿದನು ಭರದಿ॥

೪

ನಳಚರಿತ್ರೆಯ ವಿಷಯವಾಗಿಯೂ, ನಳದಮಯಂತಿಯರ ವಿಷಯವಾಗಿಯೂ ಪ್ರಕಟವಾಗಿರುವ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಸಂಗ್ರಹಿಸಿಕೊಟ್ಟಿದೆ.

## ನಳಚರಿತ್ರೆ

*"ಕವಿಯ ಕೃತಿಯಾದ 'ನಳಚರಿತ್ರೆ'ಯದು ಬಹಳ ಸರಳ ಶೈಲಿ. 'ಸುಲಿದ ಬಾಳೆಯ ಹಣ್ಣಿನಂದದಿ, ಕಳೆದ ಸಿಗುರಿನ ಕಬ್ಬಿನಂದದಿ, ಅಳಿದ ಉಷ್ಣದ ಹಾಲಿನಂದದಿ' ಎಂಬೀ ಉಪಮೆ ಇದರ ಶೈಲಿಗೆ ಒಪ್ಪುತ್ತದೆ. ಲಕ್ಷ್ಮೀಶನ 'ಕೊಡೆಯೆಂಬರಾತಪತ್ರವನು' ಮಾದರಿಯ ತೊಡಕುತೊಡಕಿನ ಶ್ಲೇಷೆಗಳಾಗಲಿ, 'ಚೆನ್ನಬಸವಪುರಾಣ'ದಲ್ಲಿರುವಂತೆ ಮಿತಿಯ ಎಲ್ಲೆ ಮೀರಿದ ವರ್ಣನೆಗಳಾಗಲಿ, ತನ್ನ ಜಾಣ್ಮೆಯನ್ನು ನುತಿಸುವ ಹಲವು ಪದ್ಯಗಳಾಗಲಿ ಇದರಲ್ಲಿ ಇಲ್ಲ. ಶೈಲಿಯ ಸರಳತೆ ವಿಷ್ಣು 'ದಾಸರ ದಾಸರ ದಾಸರ' 'ಭಂಟನಾಗಿ ಬಾಗಿಲ ಕಾಯಬೇಕೆಂದು' ಆಸೆಪಡುವ ಕನಕನ ಭಾವಕ್ಕೆ ತಕ್ಕದ್ದು.

ಒಟ್ಟಿನಲ್ಲಿ 'ಮೋಹನತರಂಗಿಣಿ'ಯೊಂದಿಗೆ 'ನಳಚರಿತ್ರೆ'ಯನ್ನು ಹೋಲಿಸಿ ನೋಡಿದರೆ, ತುಪ್ಪ ಬಸಿಯುವ ಬಗೆಬಗೆಯ ಭಕ್ಷ್ಯಗಳಿಂದ ಕೂಡಿದ ರಾಜೋಗರವನ್ನು ತಿಂದು ಅಜೀರ್ಣಹೊಂದಿದವರಿಗೆ, ಮಧುರವಾದ ಹಣ್ಣು, ಜೇನು ತುಪ್ಪ, ಹಾಲು, ಒಂದೆರಡು ಭಕ್ಷ್ಯಗಳೂ ಇಷ್ಟು ಕೂಡಿದ ಹಿತಮಿತವಾದ ಆಹಾರವನ್ನು ಬಡಿಸಿದಂತಾಗುತ್ತದೆ.'

## ನಳದಮಯಂತಿಯರ ಕಥೆ

'ನಮ್ಮ ದೇಶದ ಹೆಣ್ಣುಮಕ್ಕಳನ್ನು ಹರಸುವಾಗ ಸೀತೆಯಂತಿರು, ಸಾವಿತ್ರಿಯಂತಾಗು, ದಮಯಂತಿಯ ಬದುಕು ಎನ್ನುವುದುಂಟು. ನಯದಲ್ಲಿ, ನಡತೆಯಲ್ಲಿ ಅವರು ಹೆಸರಾದವರು. ಎಲ್ಲ ಕಾಲದವರೂ ಅವರ ಕಥೆಯನ್ನು ಕೇಳಿ ಮೆಚ್ಚಿಕೊಂಡಿದ್ದಾರೆ. ಎಲ್ಲ ದೇಶದವರಿಗೂ ಮೆಚ್ಚಿಕೆ ಆಗಿದೆ. ಗಂಡ ಹೆಂಡಿರಲ್ಲಿ ಒಬ್ಬರೊಬ್ಬರಿಗೆ ಗೌರವ ಹುಟ್ಟದಿದ್ದರೆ ಆ ಪ್ರೇಮ ದೊಡ್ಡದಾಗುವುದಿಲ್ಲ.

ದಮಯಂತಿ ನಳನಿಗೆ ಒಲಿದಳು; ದೇವತೆಗಳನ್ನು ಕೂಡ ಒಲ್ಲದೆ ಒಂದೇ ಮನಸ್ಸಿನಿಂದ ಆತನನ್ನು ವರಿಸಿದಳು. ಪಗಡೆ ಆಡಿ ಸೋಲುತ್ತಿದ್ದಾಗ ಆತನನ್ನು ಬಿಟ್ಟು ತಾಯಿಯ ಮನೆಗೆ ಹೋಗಲಿಲ್ಲ. ಆ ಸಮಯದಲ್ಲಿ

---

* ಶ್ರೀಮತಿ ಎಂ. ಆರ್. ಲಕ್ಷ್ಮಮ್ಮನವರ "ಕನಕದಾಸರ ಕೃತಿಗಳ ವಿಮರ್ಶೆ" ಎಂಬ ಲೇಖನದಿಂದ. ಕನ್ನಡ ಪರಿಷತ್ ಪತ್ರಿಕೆ, ಸಂ. ೨೩, ಸಂಚಿಕೆ ೪.

ಆಕ್ಷೇಪಣೆ ಮಾಡಿ ಹಾಗೆ ಕೆಡಿಸಲಿಲ್ಲ. ಮಕ್ಕಳನ್ನು ತನ್ನ ತವರಿಗೆ ಕಳುಹಿಸಿ ತಾನು ಅವನ ಜೊತೆಗೇ ನಿಂತಳು. ಆತನು ಬಗೆಬಗೆಯಾಗಿ ತಿಳಿಯ ಹೇಳಿದ; ಹೋಗಲಿಲ್ಲ; ಗಂಡನೊಡನೆಯೇ ಇರುವೆನೆಂದಳು; ಜೊತೆಯಲ್ಲಿದ್ದು ಅವನ ಕಷ್ಟದಲ್ಲಿ ಭಾಗವಹಿಸುವೆನೆಂದಳು. ನಡುರಾತ್ರಿ ನಿದ್ದೆ ಮಾಡುತ್ತಿದ್ದಾಗ ಅವಳನ್ನು ಬಿಟ್ಟುಹೋಗಲು, ತಬ್ಬಲಿಯಾಗಿ ಅಲೆದು ಕಡೆಗೆ ಯಾರದೋ ನೆರವಿನಿಂದ ಉಳಿದುಕೊಂಡು ತಂದೆಯ ಮನೆಯನ್ನು ಸೇರಿದಳು. ಆಕೆ ಆಮೇಲೆ ಮಾಡಿದುದು ತುಂಬ ಧೈರ್ಯದ ಕೆಲಸ. ನಮ್ಮ ಹೆಂಗಸರ ವಿಷಯವಾಗಿ ಅಂಥದನ್ನು ನುಡಿಯಲು ಕೂಡ ತುಂಬ ಎದೆ ಬೇಕು; ಎರಡನೆಯ ಬಾರಿ ದಮಯಂತಿ ಸ್ವಯಂವರ ನಡೆಯುವುದೆಂದು ಸಾರಿದಳು. ಯಾರಾದರೂ ಕಂಡದ್ದುಂಟೇ? ಕೇಳಿದುದುಂಟೇ? ಇಂಥ ಮಾತನ್ನು ಆರ್ಯರ ಹೆಣ್ಣು ಆಡಬಹುದೆ? ಆತನ ಗುರುತು ಗಟ್ಟಿಮಾಡುವುದಕ್ಕೆ ಏನೇನು ತಂತ್ರ ಹೂಡಿದಳು! ಇನ್ನೊಂದು ದೇಶದ ಅರಸನಿಗೆ ಆಸೆ ಹುಟ್ಟಿಸಿ ತನ್ನೂರಿಗೆ ಕರಸಿಕೊಂಡಳು. ಅವನ ಆಸೆ ಭಂಗಮಾಡಿದಳು. ಕರೆಸಿ, ತನ್ನೆದುರಿಗೆ ನಳನು ಬಂದಾಗ ನೇರವಾಗಿ ಪ್ರಶ್ನೆ ಕೇಳಿದಳು. ಸರಿಯಿಲ್ಲದ ರೀತಿ ಏಕೆ ನಡೆದುಕೊಂಡದ್ದೇಕೆಂದಳು. ಅದು ನಚ್ಚಿದ್ದ ಹೆಂಡತಿ, ಅವನಿಗೆ ಮಗನನ್ನು ಹೆತ್ತ ತಾಯಿ, ಕೇಳಬಹುದಾದ ಪ್ರಶ್ನೆಯೇ ಹೌದು. ಅಂಥವರನ್ನು ಕಂಡರೆ ಗೌರವ ಹುಟ್ಟುತ್ತದೆ. ಇಂಥ ಹೆಂಗಸರು ಅಬಲೆಯರಲ್ಲ; ಗುಬ್ಬಚ್ಚಿಗಳಲ್ಲ; ವೀರಮಾತೆಯರು.

ನಳನೋ: ಅವನದು ಬಹಳ ಮೃದು ಮನಸ್ಸು. ಪಗಡೆ ಆಡಿ ಸೋತು ಕಾಡುಕಾಡು ಅಲೆದು ಮೈಮೇಲೆ ಇದ್ದ ಒಂದು ಬಟ್ಟೆಯನ್ನೂ ಹಕ್ಕಿ ಎಳೆದುಕೊಂಡು ಹೋಯಿತು. ತನ್ನ ಗತಿಗೆ ನಾಚಿಕೆಯಾಯಿತು. ಹೆಂಡತಿಗೇಕೆ ಈ ಕಷ್ಟ; ಅವಳೇಕೆ ಇದನ್ನೆಲ್ಲ ನೋಡಬೇಕು, ಅನುಭವಿಸಬೇಕು ಎಂದು ಬಹುವಾಗಿ ಆಕೆಗೆ ಹೇಳಿ ನೋಡಿದ. ಎಚ್ಚರವಾಗಿದ್ದು ಅವಳಂತೂ ತಂದೆಯ ಮನೆಗೆ ಹೋಗಲು ಒಪ್ಪುವುದಿಲ್ಲವೆಂದು ತೀರ್ಮಾನವಾದಾಗ ಅವಳಿಗಾಗಿ ಹಾಗೆ ಮಾಡಿದ. ಆಮೇಲೆ ಬಹುವಾಗಿ ನಿಟ್ಟುಸಿರಿಟ್ಟ; ಬೇಗೆಪಟ್ಟ; ಅದೇ ಅವಳಿಗಾಗಿ; ತನಗೂ ತನ್ನ ನಡತೆಗಾಗಿ. ಪುನಃ ದಮಯಂತಿಯ ಊರಿಗೆ ಬಾಹುಕನಾಗಿ ಹೋಗಿ—ರಾಜನಾದನು. ಊರಿನ ಅಳಿಯನಾದವನು—ಕುದುರೆಯ ಆಳಿರುವ ಕಡೆ ಹೀನನಾಗಿ ಇದ್ದ. ಆದರೇನು? ಅವನಿದ್ದ ಮನೆ ಅರಮನೆ. ಅದು ಅವನ ಪ್ರಭಾವ. ಅವನು ಆಡಿದುದು ಆಣಿಮುತ್ತು; ಮುಟ್ಟಿದುದು ಬಂಗಾರ; ಮಾಡಿದುದು ಮರ್ಯಾದೆ. ತನ್ನನ್ನು ಮೇಲೆ

ಬಂದು ಮಾತನಾಡಿಸಿ, ಸಲಿಗೆ ತೋರಿಸಿದ ಹೆಂಗಸಿನೊಡನೆ ಆತನು ನಡೆದು ಕೊಂಡ ರೀತಿ ಋಷಿಗೆ ಒಪ್ಪತಕ್ಕ ನಡತೆ. ತಾನು ಸ್ವತಂತ್ರನಲ್ಲ; ಇನ್ನೊಬ್ಬನ ಆಳು: ಆ ಊರಿನಲ್ಲಿ ಅತಿಥಿ. ಆ ಎಲ್ಲಕ್ಕೂ ತಕ್ಕಂತೆ ನಡೆದುಕೊಳ್ಳ ಬೇಕು. ಆಕೆ ಹೆಂಗಸು; ಆಕೆ ಅವನಿರುವಲ್ಲಿಗೆ ಮೇಲೆ ಮೇಲೆ ಹೋಗಿ ಏಕಾಂತದಲ್ಲಿ ಮಾತನಾಡುವುದನ್ನು ಕಂಡರೆ ಜನ ಏನೆಂದೀತು? ಆಕೆಗೆ ಮರ್ಯಾದೆಯಲ್ಲ; ತನಗೂ ಹೆಸರಲ್ಲ. ಆದ್ದರಿಂದಲೇ ದೊಡ್ಡ ನಡತೆಯೇ ನೆಂಬುದನ್ನು ತಿಳಿದಿದ್ದ ಅವನು ಆಕೆಗೆ ಹೇಳಿದ್ದು; ನೀನು ಹೀಗೆ ಬರಬಾರದು; ಇಬ್ಬರ ಹೆಸರಿಗೂ ಇದರಿಂದ ಕೆಡಕು ಎಂದು. ಎಂಥ ಸಮಯದಲ್ಲೂ ಹಿರಿಯರು ನಡೆದುಕೊಳ್ಳಬೇಕಾದ ರೀತಿ ಇದು.

ಇಂಥ ದೊಡ್ಡ ಶೀಲದಿಂದಲೇ ನಳನಿಗೆ, ದಮಯಂತಿಗೆ ಎಂದಿಗೂ ಅಳಿಯದ ಕೀರ್ತಿ ಉಂಟಾಗಿರುವುದು. ನಮ್ಮ ದೇಶದ ಕಥೆಯಲ್ಲಿ ಅತನಿಗೂ ಆಕೆಗೂ ಅಷ್ಟು ಮೇಲಾದ ಸ್ಥಾನ ಇರುವುದು.*

೫

ನಳಚರಿತ್ರೆಯಲ್ಲಿ ಗಾದೆಯಂತೆ ಬರುವ ಕನಕದಾಸರ ಕೆಲವು ಸೂಕ್ತಿಗಳು:

೧. ಸುತ ಸಂತಾನವಿಲ್ಲದ ಸಿರಿಯದೇಕೆ ೨-೮

೨. ಪರಹಿಂಸೆ ದೋಷ ೨-೩೧

೩. ಪರರ ದುಃಖವ ಪರಿಹರಿಸಿ ಮಿಗೆ
ಪರರಿಗುಪಕಾರಾರ್ಥವೆಸಗಲು
ಪರಮ ಪುಣ್ಯವದು ೨-೪೯

೪. ಸತಿಯರನಾವ ಪರಿಯಲಿ ನಂಬಬಹುದೈ ೩-೨೧

೫. ಕುಲಗಿರಿಗೆ ನೊರಜಂತರವೆ ೩-೨೬

೬. ದಿನಪನಿದಿರಿನಲಿ ತಮದ ಗಾವಳಿಯೇ ೪-೮

೭. ವಿಧಿವಶವ ತಪ್ಪಿಸಲಾರ ಹವಣು ೪-೧೬

೮. ಸಾಧುಸಜ್ಜನ ಬಲ್ಲನೆ ಖಳನ ಹೃದಯವ ೪-೨೩

೯. ಕಮಲನಾಭನ ಕರುಣ ಕವಚವು
ಸಮೆದರಾರೇಗುವರು ೪-೨೭

೧೦. ನೆಳಲು ತನುವಿನ ಬಳಿಯಲಲ್ಲದೆ
ಚಲಿಸುವುದೆ ತಾ ಬೇರೆ ೫-೧೦

* ವಿ. ಸೀತಾರಾಮಯ್ಯ—ನಳದಮಯಂತಿ.

೧೧. ಬೊಮ್ಮ ಬರಹವ ಮೀರುವವರಾರು ೫-೪೦
೧೨. ದೈವವ ನೆನೆವ ಭಕ್ತರಿಗುಂಟೆ ಭಯ ೫-೪೨
೧೩. ಪರಹಿತವೆ ಪುಣ್ಯ ೫-೨೭
೧೪. ಕಾಲವಾವನ ಕೀಳುಮಾಡದು ೬-೧
೧೫. ತೋರ ಮಾಣಿಕವೆಂದು ಪಿಡಿದರೆ
ಭೂರಿ ಕೆಂಡವಿದಾಯ್ತು ೬-೧೫
೧೬. ಸತಿಯರಿಗೆ ಪತಿ ದೈವ ೮-೨
೧೭. ಪತಿವ್ರತವನಾಚರಿಸುವಳು ನಿಜ
ಪತಿಯ ಗುಣದೋಷಗಳನೆಣಿಪಳೆ ೮-೧೭

೬

ಕನಕದಾಸರ ವಿಷಯವಾಗಿ ಪ್ರಚಾರದಲ್ಲಿರುವ ಕಥೆಗಳಲ್ಲಿ ಕೆಲವನ್ನು ಇಲ್ಲಿ ಸಂಗ್ರಹಿಸಿ ಕೊಟ್ಟಿದೆ.

(೧) ದಾಸರು ಜಾತಿಯಲ್ಲಿ ಕುರುಬರು. ಧಾರವಾಡ ಜಿಲ್ಲೆಯ ಬಾಡ ಎಂಬ ಹಳ್ಳಿ ಇವರು ಹುಟ್ಟಿದ ಊರು. ತಂದೆಯ ಹೆಸರು ಬೀರಪ್ಪ. ತಾಯಿಯ ಹೆಸರು ಬಚ್ಚಮ್ಮ. ಬೀರಪ್ಪ ವಿಜಯನಗರದ ಅರಸರ ಆಶ್ರಯದಲ್ಲಿದ್ದ ಒಬ್ಬ ಚಿಕ್ಕ ಪಾಳೆಯಗಾರ. ಕಂದಾಯವನ್ನು ವಸೂಲು ಮಾಡುವುದು, ಕರೆ ಬಂದಾಗ ಅರಸರಿಗೆ ಯುದ್ಧಕ್ಕೆ ನೆರವಾಗುವುದು—ಇದೇ ಇವನ ಕೆಲಸ. ಈ ತಂದೆತಾಯಿಗಳ ಒಬ್ಬನೇ ಮಗ ತಿಮ್ಮಪ್ಪ. ತಿಮ್ಮಪ್ಪ ಶೂರ. ಬೇಟೆ ಆಡುವುದರಲ್ಲಿ ಇವನಿಗೆ ತುಂಬ ಪ್ರೀತಿ. ಒಮ್ಮೆ ಇವನು ಭೂಶೋಧನೆ ಮಾಡುತ್ತಿದ್ದಾಗ ಇವನಿಗೆ ಅಪಾರವಾದ ಹಣ ದೊರಕಿತು. ಅಂದಿನಿಂದ ತಿಮ್ಮಪ್ಪನಿಗೆ ಕನಕನಾಯಕನೆಂದು ಹೆಸರಾಯಿತು. ಇವನು ತನಗೆ ದೊರೆತ ಹಣದಿಂದ ಕಾಗಿನೆಲೆಯಲ್ಲಿ ಆದಿಕೇಶವನ ದೇವಾಲಯವನ್ನು ಕಟ್ಟಿಸಿದನು. ಬೇಟೆಯಾಡುವುದು, ಅಧಿಕಾರ ಮಾಡುವುದು, ಯುದ್ಧ ಹೂಡುವುದು ಎಂದರೆ ಇವನಿಗೆ ತುಂಬ ಆಸೆ. ಹೀಗೆಯೇ ಕಾಲಕಳೆಯಲು ಒಮ್ಮೆ ದೇವರು ಕನಸಿನಲ್ಲಿ ಬಂದು 'ನನ್ನ ದಾಸನಾಗು' ಎಂದನಂತೆ. ಅಧಿಕಾರ ಮಾಡುವುದನ್ನು ಬಿಟ್ಟು ತಿರಿದುಣ್ಣುವ ಕೆಲಸ ಇವನಿಗೆ ರುಚಿಸಲಿಲ್ಲ. ಹೀಗಿರಲು ಇವನ ಹೆಂಡತಿ ಮತ್ತು ತಾಯಿ ತೀರಿಕೊಂಡರು. ಆದರೂ ಕನಕನಿಗೆ ವೈರಾಗ್ಯ ಹುಟ್ಟಲಿಲ್ಲ. ಮತ್ತೆ ಮೇಲೆ ಹೇಳಿದ ಕನಸಾಯಿತು. ಆಗಲೂ ಇವನಿಗೆ ಬುದ್ಧಿ ಬರಲಿಲ್ಲ. ಒಮ್ಮೆ ಹಗೆಗಳ ಬಾಣದಿಂದ ಯುದ್ಧರಂಗದಲ್ಲಿ ಬಿದ್ದಾಗ,

ದೇವರು ಮನುಷ್ಯನಾಗಿ ಬಂದು ಅವನನ್ನು ಸಂತೈಸಿದನು. ತನ್ನ ರೂಪ ವನ್ನು ತೋರಿದನು. ಕೇಳಿದಾಗ ದರ್ಶನ ಕೊಡುವೆನೆಂದು ದೇವರು ಅಭಯ ಕೊಡಲು ಕನಕನಾಯಕನು ಕನಕದಾಸನಾದನು.

(೨) ಕನಕದಾಸರು ವ್ಯಾಸರಾಯರ ಶಿಷ್ಯರು. ದಾಸರು ವ್ಯಾಸರಾಯರ ಬಳಿಗೆ ದೇವರ ಅಪ್ಪಣೆಯಂತೆ ಶಿಷ್ಯನಾಗಲು ಬಂದರು. ವ್ಯಾಸರಾಯರು ಕುರುಬನಾದ ಇವನಿಗೆ 'ಕೋಣಮಂತ್ರ'ವನ್ನು ಉಪದೇಶಿಸಿದರು. ಅದನ್ನೇ ದಾಸರು ಭಕ್ತಿಯಿಂದ ಜಪಿಸಲು, ಯಮನ ಕೋಣ ಎದುರಿಗೆ ಬಂತು. ಅದರ ಸಹಾಯದಿಂದ ಪರ್ವತಾಕಾರವಾದ ಬಂಡೆಗಳನ್ನು ಕಿತ್ತೊಗೆದು ಹನ್ನೆರಡು ಕ್ಷೇತ್ರ ಸಾಲಗ್ರಾಮಗಳನ್ನು ಸ್ಥಾಪಿಸಲು ಅನುಕೂಲವಾಯಿತು. ದಾಸರು ರಾಯರ ನಚ್ಚಿನ ಶಿಷ್ಯರಾದರು.

(೩) ಕನಕದಾಸರನ್ನು ಕಂಡರೆ ರಾಯರ ಮಠದ ಪಂಡಿತರಿಗೆ ತುಂಬ ಹೊಟ್ಟೆಯುರಿ. ಹೀಗಿರಲು ಒಮ್ಮೆ ತುಂಬಿದ ಸಭೆಯಲ್ಲಿ ವೈಕುಂಠಕ್ಕೆ ಹೋಗುವವರಾರೆಂಬ ಪ್ರಶ್ನೆ ಬಂತು. ಒಬ್ಬೊಬ್ಬರು ಒಂದೊಂದು ರೀತಿ ಯಾಗಿ ಉತ್ತರ ಕೊಟ್ಟರು. ದಾಸರ ಸರದಿ ಬಂದಾಗ 'ಈ ಹುಟ್ಟಿನಲ್ಲಿಯೇ ನಾನು ಹೋದರೆ ಹೋಗಬಹುದು' ಎಂದು ಉತ್ತರ ಬಂತು ದಾಸರಿಂದ. ಈ ಮಾತನ್ನು ಕೇಳಿ ಎಲ್ಲರೂ ಕೋಪಗೊಂಡರು. ಆಗ ರಾಯರು 'ನಾನೆಂಬ ಅಹಂಕಾರ ಹೋದರೆ ಹೋಗಬಹುದೆಂದು' ದಾಸರ ಮಾತಿಗೆ ಅರ್ಥ ಮಾಡಿ ದರು.

(೪) ಒಮ್ಮೆ ಏಕಾದಶಿಯ ದಿನ ರಾಯರು ಶಿಷ್ಯರಿಗೆ ಯಾರೂ ಇಲ್ಲದ ಸ್ಥಳದಲ್ಲಿ ತಿಂದು ಬರುವಂತೆ ಬಾಳೆಯ ಹಣ್ಣುಗಳನ್ನು ಕೊಟ್ಟರು. ಎಲ್ಲರೂ ತಿಂದು ಬಂದು ತಾವು ತಿಂದ ಸ್ಥಳವನ್ನು ತಿಳಿಸಿದರು. ಕನಕದಾಸರು ಮಾತ್ರ ಹಣ್ಣನ್ನು ತಿನ್ನದೆ ತಂದು 'ದೇವರು ಎಲ್ಲೆಡೆಯಲ್ಲಿರುವಾಗ ಏಕಾಂತವಾದ ಸ್ಥಳವೆಲ್ಲಿ?' ಎಂದು ಗುರುಗಳ ಮುಂದೆ ಖಿನ್ನರಾಗಿ ನುಡಿದರು. ದಾಸರ ಮಹಿಮೆ ಎಲ್ಲರಿಗೂ ತಿಳಿಯಿತು.

(೫) ಒಮ್ಮೆ ದಾಸರು ಉಡುಪಿಗೆ ಹೋದಾಗ ದೇವರ ದರ್ಶನ ಅವರಿಗೆ ದೊರಕಲಿಲ್ಲ. ದಾಸರು ದೇವರನ್ನು ಸ್ತೋತ್ರಮಾಡಲು ಪೂರ್ವಾಭಿಮುಖ ನಾಗಿದ್ದ ದೇವರು ಪಶ್ಚಿಮಾಭಿಮುಖನಾದನು. ದೇವರು ಕನಕನಿಗೆ ದರ್ಶನ ಕೊಟ್ಟ ಸ್ಥಳಕ್ಕೆ ಈಗಲೂ ಕನಕನ ಕಿಂಡಿಯೆಂದು ಹೆಸರು ಇದೆ.*

---

* ಕರ್ಣಾಟಕ ಭಕ್ತವಿಜಯ, ಭಾಗ ೧

## ಪುಸ್ತಕ ಭಂಡಾರ ಮಾಲೆ

# ನೀವು ಓದಬೇಕಾದ ಪುಸ್ತಕಗಳು



ಜೈಮಿನಿಭಾರತ ಸಂಗ್ರಹ

ಸರ್ವಜ್ಞ ವಚನ ಸಂಗ್ರಹ

ರೇಷ್ಮೆ ಕೈಗಾರಿಕೆ

ವಿದ್ಯಾಪೀಠಗಳು

ಸ್ವಾಮಿ ವಿವೇಕಾನಂದರ
ಸಮಗ್ರಕೃತಿಸಾರ ಸಂಗ್ರಹ

ವಚನ ಭಾಗವತ

ಜನಪ್ರಿಯ
ವಾಲ್ಮೀಕಿ ರಾಮಾಯಣ



ಈ ಮಾಲೆಯಲ್ಲಿ ಧರ್ಮ, ಕಲೆ, ಸಾಹಿತ್ಯ, ವಿಜ್ಞಾನ ಮು
ವಿಷಯಗಳ ಮೇಲೆ ಅತ್ಯುತ್ತಮ ಪುಸ್ತಕಗಳು ಪ್ರಕಟವಾಗುವು
ಆಯಾ ವಿಚಾರದಲ್ಲಿ ಚೆನ್ನಾಗಿ ಪರಿಶ್ರಮ ಪಡೆದಿರುವ
ಪಳಗಿದ ಕನ್ನಡ ಲೇಖಕರು ಈ ಮಾಲೆಯಲ್ಲಿ
ಬರೆಯುವರು.

ರಾಜ್ಯ ವಯಸ್ಕರ ಶಿಕ್ಷಣ ಸಮಿತಿ
ಮೈಸೂರು